# ಹಾನಸಿ

ಜನವರಿ 2002

ತಿಂಗಳ ಪತ್ರಿಕೆ

ಹಾನಿಕಾರಕ ಗರ್ಭ ನಿರೋಧಕ ಚುಚ್ಚುಮದ್ದುಗಳ ಒಂದು ಚರಿತ್ರೆ

''ಹಣ ನೀಡಿ - ಚಿಕಿತ್ಸೆ ಪಡೆ'' - ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿಯ ಬಗ್ಗೆ ಒಂದು ವಿಮರ್ಶೆ

ಐ.ಪಿ.ಟಿ. - ಗುಜರಾತ್‌ನಲ್ಲಿ ನಡೆಸಿದ ಸಮೀಕ್ಷೆಯ ವರದಿ

ಭಾಗೀರಥಿ ಮತ್ತು ಅಪ್ಪಾಜಿ

# ಮಾನಸ

ತಿಂಗಳ ಪತ್ರಿಕೆ

ಸಂಪುಟ 21 ಸಂಚಿಕೆ : 1

ಜನವರಿ - 2002





ವಿಳಾಸ
''ಮಾನಸ'' ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067
ಇ-ಮೈಲ್ : manasapathrike@yahoo.co.in



ಸೂಚನೆ: ಬಿಡಿ ಪ್ರತಿ 5-00 ರೂ.
ವಾರ್ಷಿಕ ಚಂದಾ 50-00 ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


## ಈ ಸಂಚಿಕೆಯಲ್ಲಿ.........






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - 560 067



# ಸಂಪಾದಕೀಯ

ರಾಷ್ಟ್ರದ ಜನಸಂಖ್ಯೆಯ ಶೇ.74.3 ರಷ್ಟು ಜನರು ಪೌಷ್ಠಿಕ ಆಹಾರದ ಕೊರತೆಯಿಂದ ಬಳಲುತ್ತಿದ್ದಾರೆ. ಇದರಲ್ಲಿ ಶೇ. 35.8ರಷ್ಟು ಮಹಿಳೆಯರು 15ರಿಂದ 45 ವರ್ಷ ವಯೋಮಾನದವರಿದ್ದಾರೆಂಬ ಅಂಶವನ್ನು ಇತ್ತೀಚೆಗೆ ರಾಷ್ಟ್ರೀಯ ಕುಟುಂಬ ಆರೋಗ್ಯ ಸಂಸ್ಥೆಯು ಹೊರಗೆಡವಿದೆ. ಇದು ನಮ್ಮ ದೇಶದಲ್ಲಿ ಜಾರಿ ಇರುವ ರಾಷ್ಟ್ರೀಯ ಆರೋಗ್ಯ ನೀತಿಯ ಮೇಲೆ ಬೆಳಕು ಚೆಲ್ಲುತ್ತದೆ.

1981ರಲ್ಲಿ ಐ.ಸಿ.ಎಸ್.ಎಸ್.ಆರ್ ಹಾಗೂ ಐ.ಸಿ.ಎಂ.ಆರ್. ನೀಡಿದ 'ಎಲ್ಲರಿಗೂ ಆರೋಗ್ಯ,' ವರದಿಯು ಆರೋಗ್ಯದ ಸಮಸ್ಯೆಯನ್ನು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ದೃಷ್ಠಿಕೋನದಿಂದ ವಿಶ್ಲೇಷಿಸುತ್ತದೆ. ಪರ್ಯಾಯ ವ್ಯವಸ್ಥೆಯನ್ನು ಸೂಚಿಸುವುದರ ಜೊತೆಗೆ ಜನರ ಭಾಗವಹಿಸುವಿಕೆಯನ್ನು ಒತ್ತಿ ಹೇಳಿತ್ತು. ಗ್ರಾಮ ಮಟ್ಟದಲ್ಲಿ ಪಂಚಾಯಿತಿಗಳ ಹಂತದಲ್ಲಿ ವಿಶೇಷವಾಗಿ ಸ್ಥಳೀಯ ಮಹಿಳೆಯರನ್ನು ಒಳಗೊಂಡಂತಹ ವ್ಯವಸ್ಥೆಯಲ್ಲಿ ಆರ್ಥಿಕ ಹಾಗೂ ಆಡಳಿತಾತ್ಮಕ ನಿಯಂತ್ರಣವನ್ನು ಹೊಂದುವುದರ ಮೂಲಕ ಆರೋಗ್ಯದ ಸಮಸ್ಯೆಗಳನ್ನು ಪರಿಣಾಮಕಾರಿಯಾಗಿ ಬಗೆ ಹರಿಸಬಹುದೆಂದು ಸಲಹೆ ನೀಡಲಾಗಿತ್ತು.

*ನಮ್ಮ ಸಂವಿಧಾನದ 73, 74ನೇ ತಿದ್ದುಪಡಿಯು ಜನರ ಜೀವನದ ಮೇಲೆ* ಪರಿಣಾಮ ಬೀರುವ 29 ವಿಷಯಗಳಲ್ಲಿ ಒಂದಾದ ಆರೋಗ್ಯದ ಹಕ್ಕನ್ನು ಜನರಿಗೆ ನೀಡಲಾಗಿದೆ. ಆದರೆ ಇತ್ತೀಚೆಗೆ ಮಂಡಿಸಲಾದ ಆರೋಗ್ಯ ಕರಡು ಪ್ರತಿಯಲ್ಲಿ ಜನರ ಸಂವಿಧಾನಾತ್ಮಕ ಹಕ್ಕನ್ನು ಗಾಳಿಗೆ ತೂರಲಾಗಿದೆ. ಜಾಗತೀಕರಣ ಹಾಗೂ ಖಾಸಗೀಕರಣದ ಪರಿಣಾಮದಿಂದಾಗಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಆರೋಗ್ಯಕ್ಕೆ ಸಂಬಂಧಪಟ್ಟಂತೆ ಜನರ ಮೂಲಭೂತ ಹಕ್ಕನ್ನು ಉಲ್ಲಂಘಿಸುತ್ತಿವೆ. ಜಾಗತೀಕರಣದ ಹಿನ್ನಲೆಯಲ್ಲಿ ರಾಷ್ಟ್ರೀಯ ಆರೋಗ್ಯದ ಸಮಸ್ಯೆಗಳನ್ನು ವಿಶ್ಲೇಷಿಸಬೇಕಾಗುತ್ತದೆ. ಬಹು ರಾಷ್ಟ್ರೀಯ ಕಂಪನಿಗಳ ಪೈಪೋಟಿ ಮಾರುಕಟ್ಟೆಯ ಒತ್ತಡದಿಂದಾಗಿ ಬಡ ಜನರು ವಿಶೇಷವಾಗಿ ಮಹಿಳೆಯರು ಮತ್ತು ಮಕ್ಕಳು ಅಮಾನವೀಯವಾದ ಶೋಷಣೆಗೆ ಒಳಗಾಗುತ್ತಿದ್ದಾರೆ. ನಮ್ಮ ದೇಶದ ರಾಷ್ಟ್ರೀಯ ಆರೋಗ್ಯ ನೀತಿಯು ನಮ್ಮ ಸ್ಥಳೀಯ ಸಮಸ್ಯೆಗಳ ಆಧಾರದ ಮೇಲೆ ರೂಪಿತವಾಗಿಲ್ಲ. ಇವು ವಿಶ್ವಬ್ಯಾಂಕ್‌ನ ನಿರ್ದೇಶನದಲ್ಲಿ ಮುಂದುವರಿದ ದೇಶಗಳ ಅಗತ್ಯಕ್ಕೆ ಅನುಗುಣವಾಗಿ ಜಾರಿಗೆ ಬರುತ್ತಿವೆ. ನಮ್ಮ ದೇಶದ ಮಹಿಳೆಯರ ಮೇಲೆ ಪ್ರಯೋಗಿಸಲಾಗುತ್ತಿರುವ ಗರ್ಭ ನಿರೋಧಕಗಳು ಇದಕ್ಕೆ ಉತ್ತಮ ನಿದರ್ಶನವಾಗಿದೆ.

ರಾಷ್ಟ್ರೀಯ ಆರೋಗ್ಯ ನೀತಿಯನ್ನು ರೂಪಿಸುವಾಗ ಸಮಗ್ರ ದೃಷ್ಟಿಕೋನದ ಕೊರತೆಯನ್ನು ಕಾಣಬಹುದು. ಆರೋಗ್ಯದ ಸಮಸ್ಯೆಯನ್ನು ಆಹಾರದ ಭದ್ರತೆ, ವಸತಿ, ಪೌಷ್ಠಿಕ ಆಹಾರದ ಕೊರತೆ, ನೀರು ಮುಂತಾದ ಮೂಲಭೂತ ಅಗತ್ಯಗಳಿಂದ ಬೇರ್ಪಡಿಸಿ ನೋಡಲಾಗುವುದಿಲ್ಲ. ಆರೋಗ್ಯದ ಸೇವೆಯನ್ನು ಪಡೆಯುವಲ್ಲಿ ಗ್ರಾಮೀಣ, ನಗರ, ಜಾತಿ, ವರ್ಗ, ಸ್ತ್ರೀ ಪಕ್ಷಪಾತ ಮುಂತಾದ ವ್ಯತ್ಯಾಸಗಳು ಸಹ ಕೆಲಸ ಮಾಡುತ್ತಿವೆ. ರಾಷ್ಟ್ರೀಯ ಬಜೆಟ್‌ನ ಶೇ 90 ಭಾಗ ಸಿಬ್ಬಂದಿಯ ವೇತನಕ್ಕೆ ವ್ಯಯವಾಗುತ್ತಿದೆ. ಗ್ರಾಮೀಣ ಪ್ರದೇಶದ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸಹ ಸಮರ್ಥವಾಗಿ ನಿರ್ವಹಿಸಲಾಗದ ದುಸ್ಥಿತಿಗೆ ಸರ್ಕಾರಗಳು ತಲುಪಿವೆ. ಸರ್ಕಾರಗಳು ಸಾಮಾಜಿಕ ಭದ್ರತೆಯ ಕಾರ್ಯಕ್ರಮಗಳನ್ನು ಮೂಲೆಗೊತ್ತಿ ತನ್ನ ಜವಾಬ್ದಾರಿಯನ್ನು ಕಳಚಿಕೊಳ್ಳುತ್ತಿದೆ. ಲಾಭ ಗಳಿಸುವುದನ್ನೇ ತನ್ನ ಗುರಿಯಾಗಿಸಿ ಕೊಂಡಿರುವ ಖಾಸಗಿಯವರಿಗೆ ನೀಡುವುದರ ಮೂಲಕ ಸರ್ಕಾರಗಳು ತಮ್ಮ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿವೆ.

- ಸಂಪಾದಕ ಮಂಡಳಿ

# ಹಾನಿಕಾರಕ ಗರ್ಭ ನಿರೋಧಕ ಚುಚ್ಚುಮದ್ದುಗಳ ಒಂದು ಚರಿತ್ರೆ

'ಸಹೇಲಿ' ಎಂಬ ದೆಹಲಿಯಲ್ಲಿರುವ ಮಹಿಳಾ ಸಂಘಟನೆಯು ಇತರ ಮಹಿಳಾಸಂಘಟನೆಗಳೊಡನೆ ಸೇರಿ ಈ ಹಾನಿಕಾರಕ ಗರ್ಭನಿರೋಧಕ ಚುಚ್ಚುಮದ್ದುಗಳ ವಿರುದ್ಧ 1984ರಿಂದ ನಿರಂತರವಾಗಿ ತೀವ್ರ ಪ್ರಚಾರ ನಡೆಸಿವೆ. ಸಾರ್ವಜನಿಕರಿಗೆ ಇದರ ದುಷ್ಪರಿಣಾಮಗಳ ಬಗ್ಗೆ ಮಾಹಿತಿ ದೊರೆಯುವಂತಹ ಹಲವಾರು ಕಾರ್ಯಕ್ರಮಗಳನ್ನು ನಡೆಸುತ್ತಾ ಬಂದಿದೆ. ಈ ನಿಟ್ಟಿನಲ್ಲಿ ಇಂತಹ ಹಾನಿಕಾರಕ ಗರ್ಭನಿರೋಧಕಗಳ ಹುಟ್ಟು, ಬೆಳವಣಿಗೆ, ಕಾರ್ಯ ನಿರ್ವಹಿಸುವ ರೀತಿ, ಅವುಗಳ ಹಿಂದಿರುವ ರಾಜಕೀಯ, ಅವುಗಳನ್ನು ತಯಾರಿಸುವವರ ಲಾಭ ಕೋರತನ ಮತ್ತು ಬಹಳ ಮುಖ್ಯವಾಗಿ ಅದರ ಉಪಯೋಗದಿಂದ ಆಗುವ ದುಷ್ಪರಿಣಾಮ ಮುಂತಾದವುಗಳ ಬಗ್ಗೆ ವಿವರವಾಗಿ ಒಂದು ವರದಿ ತಯಾರಿಸಿದೆ. ಆ ವರದಿ ಆಧಾರಿತ ಈ ಲೇಖನವನ್ನು 'ಮಾನಸ' ಓದುಗರಿಗಾಗಿ ಪ್ರಕಟಿಸುತ್ತಿದ್ದೇವೆ.

## ಪರಿಚಯ ಮತ್ತು ಹಿನ್ನಲೆ :

ಜನಸಂಖ್ಯೆ ಸ್ಫೋಟಗೊಳ್ಳುತ್ತಿರುವುದರಿಂದ ದೇಶದ ಪ್ರಗತಿ ಕುಂಟಿತವಾಗುತ್ತಿದೆ. ಇದು ಅಪಾಯಕಾರಿ ಸೂಚನೆ ಎಂದು ಮನಗಂಡಿರುವ ರಾಷ್ಟ್ರೀಯ ಯೋಜನಾ ಸಮಿತಿಯು ಸರ್ಕಾರದ ಕಾರ್ಯನೀತಿಗಳಲ್ಲಿ ಜನಸಂಖ್ಯೆ ನಿಯಂತ್ರಣ ಮೊದಲ ಆದ್ಯತೆ ಆಗಬೇಕು ಎಂದಿದೆ. ಇದರ ಹಿನ್ನಲೆಯಲ್ಲಿ ಭಾರತ ಸರ್ಕಾರ ಅತ್ಯಂತ ತುರ್ತಿನಲ್ಲಿ ಜನಸಂಖ್ಯೆ ನಿಯಂತ್ರಿಸಲು ತುದಿಗಾಲಲ್ಲಿ ನಿಂತಿದೆ. ಅಪಾಯಕಾರಿ ಮತ್ತು ಅತ್ಯಂತ ದುಷ್ಪರಿಣಾಮ ಬೀರುವ ಗರ್ಭನಿರೋಧಕ ಚುಚ್ಚುಮದ್ದುಗಳನ್ನು ಮಹಿಳೆಯ ಮೇಲೆ ಉಪಯೋಗಿಸಲು ಕುಟುಂಬ ಕಲ್ಯಾಣ ಕಾರ್ಯಕ್ರಮದ ಮೂಲಕ ಹವಣಿಸುತ್ತಿದೆ. ಈ ಅಪಾಯಕಾರಿ ಗರ್ಭನಿರೋಧಕ ಚುಚ್ಚು ಮದ್ದುಗಳನ್ನು ಸರ್ಕಾರ ತನ್ನ ಕುಟುಂಬ ಕಲ್ಯಾಣ ಕಾರ್ಯಕ್ರಮದಡಿಯಲ್ಲಿ ಉಪಯೋಗಿಸುವುದನ್ನು ತಡೆಯಲು ದೇಶಾದ್ಯಂತ ಮಹಿಳಾ ಸಂಘಟನೆಗಳು, ಮಾನವೀಯ ಹಕ್ಕುಗಳ ಸಂಸ್ಥೆಗಳು ನಿರಂತರವಾಗಿ ಪ್ರಚಾರ ಮಾಡಿ ಹೋರಾಟ ನಡೆಸುತ್ತಿದೆ. ಗರ್ಭನಿರೋಧಕ ಚುಚ್ಚು ಮದ್ದುಗಳಾದ 'ನೆಟ್ ಇನ್' ಅನ್ನು 1986 ರಲ್ಲಿ ಮತ್ತು 'ಡೆಪೊಪ್ರೊವೆರಾ' ಅನ್ನು 1994ರಲ್ಲಿ ಖಾಸಗಿ ವೈದ್ಯರು ಉಪಯೋಗಿಸಲು 'ಡ್ರಗ್ ಕಂಟ್ರೋಲರ್ ಆಫ್ ಇಂಡಿಯಾ' ದವರು ಅನುಮತಿ ನೀಡಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಯುನೈಟೆಡ್ ನೇಶನ್ಸ್ ಜನರಲ್ ಅಸೆಂಬ್ಲಿಯು 'ಜನಸಂಖ್ಯೆ ಮತ್ತು ಬೆಳವಣಿಗೆ' ಕುರಿತಾಗಿ ಅಂತರರಾಷ್ಟ್ರೀಯ ಮಟ್ಟದ ಸಭೆಯನ್ನು ಕರೆದಿತ್ತು. ಜನಸಂಖ್ಯೆ ನಿಯಂತ್ರಿಸುವ ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೆ ತರುವಲ್ಲಿ ದೇಶದ ಎಲ್ಲ ಪ್ರಜೆಗಳ ಘನತೆ ಗೌರವಕ್ಕೆ ಮತ್ತು ಹಕ್ಕುಗಳಿಗೆ ಚ್ಯುತಿ ಆಗದಂತೆ ಬದ್ಧರಾಗಿದ್ದೀವಿ ಎಂದು ಈ ಸಭೆಯಲ್ಲಿ ಭಾಗವಹಿಸಿದ ಭಾರತ ಸರ್ಕಾರ ಘೋಷಿಸಿದೆ. ಆದರೆ ಆಂಧ್ರ ಪ್ರದೇಶದ ಪಟಾಂಚೆರುವು ಜಿಲ್ಲೆಯಲ್ಲಿ ಈ ಚುಚ್ಚುಮದ್ದುಗಳನ್ನು ನೀಡಲು ಭರ್ತಿಮಾಡಿಕೊಂಡ ಹಲವಾರು ಮಹಿಳೆಯರನ್ನು ಹೈದರಾಬಾದಿನ ಸ್ತ್ರೀ ಶಕ್ತಿ ಸಂಘಟನೆಯು ಮಾತನಾಡಿಸಿ ಒಂದು ಅಧ್ಯಯನ ನಡೆಸಿದೆ. ಈ ಚುಚ್ಚು ಮದ್ದು ತೆಗೆದುಕೊಳ್ಳುವುದರಿಂದ ದುಷ್ಪರಿಣಾಮ ಇರುತ್ತದೆ ಎಂಬ ಅಂಶ ತಮಗೆ ತಿಳಿಸಲಿಲ್ಲ, ಗೊತ್ತಿದ್ದರೆ ಅವನ್ನು ತೆಗೆದುಕೊಳ್ಳುತ್ತಿರಲಿಲ್ಲ ಎಂದು ಹಲಾವರು ಮಹಿಳೆಯರು ಹೇಳಿಕೆ ನೀಡಿದ್ದಾರೆ. ಈ ಎಲ್ಲ ಮಹಿಳೆಯರು ಕೆಳವರ್ಗಕ್ಕೆ ಸೇರಿದವರು ಮತ್ತು ಬಡ ಕುಟುಂಬದವರಾಗಿದ್ದರು ಎಂದು ಅಧ್ಯಯನ ತಿಳಿಸುತ್ತದೆ. ಇದು ಮಹಿಳಾ ಹಕ್ಕು, ಘನತೆ, ಗೌರವಗಳ ಉಲ್ಲಂಘನೆಯಲ್ಲವೆ?

ತಾಯಿ ಮತ್ತು ಮಗುವಿನ ಆರೋಗ್ಯ ಉತ್ತಮ ಪಡಿಸುವ ನಿಟ್ಟಿನಲ್ಲಿ ಆರ್.ಸಿ.ಎಚ್ (RCH) ಎಂಬ ಸಮಗ್ರ ಕಾರ್ಯಕ್ರಮ ರೂಪಿಸಿರುವ ಈ ಘನ ಸರ್ಕಾರ ಮಹಿಳೆಯ ಆರೋಗ್ಯಕ್ಕೆ ಹಾನಿಕಾರಕವಾಗಿರುವ ಈ ಗರ್ಭ ನಿರೋಧಕ ಚುಚ್ಚುಮದ್ದುಗಳನ್ನು ಮಹಿಳೆಯರ ಮೇಲೆ ಬಲವಂತವಾಗಿ ಹೇರುತ್ತಿರುವುದು ವಿಪರ್ಯಾಸ. ಇನ್ನು ಮುಂದೆ ಗರ್ಭನಿರೋಧಕ ಚುಚ್ಚುಮದ್ದುಗಳು ಸರ್ಕಾರದ ಕುಟುಂಬ ಯೋಜನಾ ಕಾರ್ಯಕ್ರಮದ ಒಂದು ಮುಖ್ಯ

ಅಂಗವಾಗಲಿದೆ ಎಂದು ''ಯುನೈಟೆಡ್ ನೇಶನ್ಸ್ ಪಾಪ್ಯುಲೇಶನ್ ಫಂಡ್'' ಭಾರತ ಸರ್ಕಾರದ ಜೊತೆ ಗೂಡಿ ಅಧ್ಯಯನ ನಡೆಸಿ ವರದಿಯೊಂದನ್ನು ಪ್ರಕಟಿಸಿದೆ. ಐ.ಸಿ.ಎಂ.ಆರ್ (ICMR) ಸಂಸ್ಥೆ 1980ರಲ್ಲಿ 'ಡೆಪೊಪ್ರೊವೆರಾ' ವನ್ನು ಭಾರತದಲ್ಲಿ ಉಪಯೋಗಿಸುವುದು ಸಮರ್ಪಕ ಅಲ್ಲ ಎಂದು ಹೇಳಿತ್ತು. 1992ರಲ್ಲಿ ಅಮೆರಿಕಾ ತನ್ನ ದೇಶದಲ್ಲಿ 'ಡೆಪೊ' ವನ್ನು ಉಪಯೋಗಿಸಲು ಅನುಮತಿ ನೀಡಿದ್ದರ ಹಿನ್ನಲೆಯಲ್ಲಿ 'ಡೆಪೊ'ವನ್ನು ಭಾರತ ದೇಶದಲ್ಲಿ ಖಾಸಗಿ ವೈದ್ಯರು ಉಪಯೋಗಿಸಲು ಇದ್ದಕ್ಕಿದ್ದಂತೆ ಅನುಮತಿ ನೀಡಲಾಯಿತು. ಇದಾದ ನಂತರ 1998ರಲ್ಲಿ ಇಂಡಿಯನ್ ಕೌನ್ಸಿಲ್ ಆಫ್ ಮೆಡಿಕಲ್ ರಿಸರ್ಚ್ ಸಂಸ್ಥೆಯು ಒಂದು ಸಭೆ ನಡೆಸಿತ್ತು. ಅದರಲ್ಲಿ ಮಹಿಳಾ ಸಂಘಟನೆಗಳು, ಆರೋಗ್ಯ ಕಾರ್ಯಕರ್ತರು, ಮಾನವ ಹಕ್ಕುಗಳ ಸಂಘಟನೆಗಳು ಭಾಗವಹಿಸಿದ್ದವು. ಈ ಎಲ್ಲ ಸಂಘಟನೆಗಳು ತೀವ್ರ ವಿರೋಧ ವ್ಯಕ್ತಪಡಿಸಿದರೂ, ಈ ಚುಚ್ಚು ಮದ್ದುಗಳನ್ನು ಕುಟುಂಬ ಯೋಜನಾ ಕಾರ್ಯಕ್ರಮದಲ್ಲಿ ಹಂತ ಹಂತವಾಗಿ ಅಳವಡಿಸಿಕೊಳ್ಳಲು ಅನುಮತಿ ನೀಡಿತು.

'ನೆಟ್ ಇನ್', 'ಡೆಪೊಪ್ರೊವೆರಾ' ಗಳೆರಡೂ 1950ರಲ್ಲಿ ಅಮೆರಿಕಾ ದೇಶದಲ್ಲಿ ಬೆಳವಣಿಗೆ ಕಂಡವು. ಅವು ಬೆಳಕಿಗೆ ಬಂದಾಗಿನಿಂದಲೂ ವಿವಿಧ ರೀತಿಯ ನಿಂದನೆಗೆ ಒಳಪಟ್ಟ ಚರಿತ್ರೆಯೇ ಇದೆ. ಇವೆರಡೂ ದೀರ್ಘಾವಧಿ ಕಾರ್ಯವೆಸಗುವ ಚುಚ್ಚುಮದ್ದುಗಳು. ಇವೆರಡೂ ಹೆಚ್ಚೂ ಕಡಿಮೆ ಒಂದೇ ರೀತಿಯ ಕಾರ್ಯವೆಸಗುತ್ತವೆ. ಮಹಿಳೆಯ ದೇಹದ ಮೇಲೆ ಇವೆರಡೂ ಬೀರುವ ದುಷ್ಪರಿಣಾಮ ಕೂಡ ಒಂದೇ ರೀತಿಯದ್ದು. ಈ ಗರ್ಭ ನಿರೋಧಕ ಚುಚ್ಚುಮದ್ದುಗಳನ್ನು ಬಳಸುವುದರಿಂದ ಹಲವಾರು ಅಲ್ಪಾವಧಿ ಮತ್ತು ಧೀರ್ಘಾವಧಿ ದುಷ್ಪರಿಣಾಮಗಳಿಗೆ ಒಳಗಾದಂತೆ. ಆದ್ದರಿಂದ ಈ ಚುಚ್ಚುಮದ್ದುಗಳನ್ನು ಗರ್ಭ ನಿರೋಧಕಗಳಾಗಿ ಬಳಸುವುದರಿಂದ ಮಹಿಳೆಯು ಒಟ್ಟಾರೆ ಆರೋಗ್ಯವನ್ನು ಸುರಕ್ಷಿತವಾಗಿಸುವುದರ ಬಗ್ಗೆ ಹಲವಾರು ಪ್ರಶ್ನೆಗಳು ಉದ್ಭವಿಸಿದ್ದವು. ಇದರ ಉಪಯೋಗದಿಂದ ಇಲಿಗಳಲ್ಲಿ ಗಡ್ಡೆ ಬೆಳದಿದ್ದು ಬೆಳಕಿಗೆ ಬಂದ ನಂತರ, ಖಚಿತವಾಗಿ ಇದರ ಉಪಯೋಗ ಮಹಿಳೆಯ ದೇಹಕ್ಕೆ ಹಾನಿಕಾರಕ ಎಂದು ಪ್ರಪಂಚದಾದ್ಯಂತ ಮಹಿಳಾ ಗುಂಪುಗಳು ಸೂಚಿಸಿದವು. ಇವುಗಳ ಬಗ್ಗೆ ಯು.ಕೆ. ಮತ್ತು ಯು.ಎಸ್.ಎ. ನಲ್ಲಿ ಸಾರ್ವಜನಿಕ ವಿಚಾರಣೆಗಳು ನಡೆದವು. ಇದರ ವಿರುದ್ಧ ಅನೇಕ ಪುರಾವೆಗಳನ್ನು ಮಹಿಳಾ ಸಂಘಟನೆಗಳು ಒದಗಿಸಿ ಇದು ಹಲವು ರೀತಿಯಲ್ಲಿ ಮಹಿಳೆಯ ದೇಹಕ್ಕೆ ಹಾನಿಕಾರಕ ಎಂದು ತೋರಿಸಿದವು.

ಸುಮಾರು 1980ರ ಮೊದಲಲ್ಲಿ ಭಾರತದ ಮಹಿಳಾ ಸಂಘಟನೆಗಳಿಗೆ ಮತ್ತು ಆರೋಗ್ಯ ಕಾರ್ಯಕರ್ತರಿಗೆ ಈ ಚುಚ್ಚುಮದ್ದುಗಳ ಬಳಕೆಯಿಂದ ಉಂಟಾಗುವ ಹಾನಿಕಾರಕ ದುಷ್ಪರಿಣಾಮಗಳ ಬಗ್ಗೆ ಅರಿವು ಇತ್ತು. ಆದರ ಜೊತೆಗೆ ಜನನ ನಿಯಂತ್ರಣದ ಹಿಂದೆ ಇರುವ ರಾಜಕೀಯ, ನೆನಗುದಿಗೆ ಬಿದ್ದಿರುವ ಮಹಿಳಾ ಆರೋಗ್ಯ ಸ್ಥಿತಿ ಮತ್ತು ಔಷಧ ವ್ಯಾಪಾರಿಗಳ ಒಳ ಸಂಚು ಮುಂತಾದ ವಿಷಯಗಳ ಬಗ್ಗೆ ಮಹಿಳಾ ಸಂಘಟನೆಗಳು ವಿವರವಾಗಿ ಚರ್ಚೆ ನಡೆಸಿದ್ದವು. 'ನೆಟ್ ಇನ್' ಮತ್ತು 'ಡೆಪೊ' ಗಳ ಬಳಕೆಯ ವಿರುದ್ಧ ಪ್ರಚಾರ ಹಂತ ಹಂತವಾಗಿ ಪ್ರಾರಂಭವಾಗಿ ಚಟುವಟಿಕೆಗಳು ಚುರುಕಾಗಿ ಭಾರತದ ಮಹಿಳಾ ಆರೋಗ್ಯ ಚಳುವಳಿಯ ಒಂದು ಭಾಗವಾಯಿತು. ಅಮೆರಿಕದ ಮಾರುಕಟ್ಟೆಗಳಲ್ಲಿ ಉಚ್ಚಾಟನೆ ಕಂಡ 'ನೆಟ್ ಇನ್' ಅನ್ನು ಭಾರತದ ಕುಟುಂಬ ಕಲ್ಯಾಣ ಕಾರ್ಯಕ್ರಮದಲ್ಲಿ ಬಳಸುವುದರ ಬಗ್ಗೆ 1985ರಲ್ಲಿ ಪತ್ರಿಕೆಯಲ್ಲಿ ವರದಿ ಬಂದಿತ್ತು. ಈ ವರದಿಯ ಹಿನ್ನಲೆಯಲ್ಲಿ ಆರೋಗ್ಯ ಕಾರ್ಯಕರ್ತರು, ಮಹಿಳಾ ಸಂಘಟನೆಗಳು ಭಾರತದಲ್ಲಿ ನಡೆದ 'ನೆಟ್ ಇನ್' ಪ್ರಯೋಗದ ಕುರಿತಾಗಿ ಮಾಹಿತಿ ಕಲೆಹಾಕಲು ಶತ ಪ್ರಯತ್ನ ನಡೆಸಿದವು. ಆದರೆ ಈ ಸಂಘಟನೆಗಳಿಗೆ ಯಾವುದೇ ರೀತಿಯ ಮಾಹಿತಿ ದೊರೆಯದಂತೆ ಬಿಗಿ ವ್ಯವಸ್ಥೆ ಮಾಡಲಾಗಿತ್ತು.

*ಗರ್ಭ ನಿರೋಧಕ ಚುಚ್ಚು ಮದ್ದುಗಳ ಪ್ರವೇಶ ಯಾರ ಹಿತಕ್ಕಾಗಿ ?*

ಈ ಪ್ರಶ್ನೆ ಉದ್ಭವಿಸುವುದು ಸಹಜ, ಇಷ್ಟೊಂದು ಹಾನಿಕಾರಕ ಮತ್ತು ಪ್ರಪಂಚದಾದ್ಯಂತ ನಿಂದನೆಗೆ ಒಳಪಟ್ಟಿರುವ ಇವುಗಳನ್ನು ಕುಟುಂಬ ಕಲ್ಯಾಣದ ಕಾರ್ಯಕ್ರಮದಲ್ಲಿ ಬಳಸಿ ತೀರಬೇಕೆಂದು ನಮ್ಮ ಕಾರ್ಯ ನೀತಿ ಸೂಚಿಸುವವರಿಗೆ ಯಾಕೆ ಹಠ? ಈ ಪ್ರಶ್ನೆಯನ್ನು ಅರ್ಥಮಾಡಿಕೊಳ್ಳ ಬೇಕಾದರೆ, ಭಾರತದಲ್ಲಿ ಗರ್ಭನಿರೋಧಕಗಳನ್ನು ರೂಪಿಸಿ ಜಾರಿಗೆತರುವ ಜವಾಬ್ದಾರಿ

ಹೊತ್ತವರು ಸರ್ಕಾರದ ಕುಟುಂಬ ಕಲ್ಯಾಣ ಯೋಜನೆಯವರು. ಈ ಇಲಾಖೆಯು ಸರ್ಕಾರದ ಕಾರ್ಯ ನೀತಿಗಳಿಗೆ ಬದ್ಧವಾಗಿರುತ್ತದೆ. 'ಸ್ಟೆರಲೈಸೇಷನ್' ಮತ್ತು ಎರಡು ಮಕ್ಕಳ ಮಧ್ಯೆ ಕಾಲ ವಿರಾಮ ನೀಡಲು ಐ.ಯು.ಡಿ., ಮಾತ್ರೆ ಮತ್ತು ನಿರೋಧ್‌ಗಳ ಬಳಕೆ ಮಹಿಳೆಯರು ಮಾಡುತ್ತಿದ್ದರು. ಈ ಪದ್ಧತಿಗಳಲ್ಲಿ ಹೆಚ್ಚು ಮಂದಿ ದಂಪತಿಗಳು ಸ್ಟೆರಿಲೈಸೇಷನ್ ಬಳಕೆ ಮಾಡುತ್ತಿರುವುದು ಕಂಡು ಬರುತ್ತದೆ. ಕುಟುಂಬ ಕಲ್ಯಾಣ ಕಾರ್ಯಕ್ರಮದ ಅಡಿಯಲ್ಲಿ ಈ ಗರ್ಭನಿರೋಧಕಗಳ ಬಗ್ಗೆ ಹೆಚ್ಚು ಹೆಚ್ಚು ಮಾಹಿತಿ ನೀಡಿ ಅದರ ಉಪಯೋಗ ಪಡೆಯುವಂತೆ ಪ್ರೋತ್ಸಾಹ ಮಾಡಿದರೂ ಸಹ, ಮಕ್ಕಳ ಮಧ್ಯೆ ಕಾಲವಿರಾಮ ನೀಡುವಂತಹ ಗರ್ಭನಿರೋಧಕ ಬಳಕೆಯು ವಿಪರೀತ ಕಡಿಮೆ ಇರುವುದು ತಿಳಿದು ಬಂದಿದೆ. ಬೇರೆ ಬೇರೆ ಗರ್ಭ ನಿರೋಧಕಗಳನ್ನು ಬಳಸುವ ಅಂಕಿ ಅಂಶಗಳು ಈ ರೀತಿ ಇವೆ.

ವಿವಿಧ ರೀತಿಯ ಗರ್ಭ ನಿರೋಧಕ ಬಳಕೆದಾರರ ಶೇಕಡವಾರು ಪಟ್ಟಿ 1998

| | |
|---|---|
| ಸ್ಟೆರಿಲೈಸೇಷನ್ | 71.5 % |
| ಸಾಂಪ್ರದಾಯಿಕ ಪದ್ಧತಿ | 10.5 % |
| ನಿರೋಧ್ ಬಳಕೆ | 6.3 % |
| ಐ.ಯು.ಡಿ. ಬಳಕೆ | 6.2 % |
| ಮಾತ್ರೆ | 5.1 % |
| ಚುಚ್ಚು ಮದ್ದು | 0.5 % |

ಜನನ ನಿಯಂತ್ರಣ ಅಂಕಿ ಅಂಶವು ಗಮನೀಯವಾಗಿ ಹೆಚ್ಚಬೇಕಾದರೆ, ಮಕ್ಕಳ ಮಧ್ಯೆ ಕಾಲ ವಿರಾಮ ನೀಡುವಂತಹ ಗರ್ಭನಿರೋಧಕಗಳು ಬಳಕೆಯಾಗಬೇಕು ಎಂಬುದು ರಾಜ್ಯಾಂಗ ಕಾರ್ಯ ನೀತಿ ಸೂಚಿಸಿರುವವರ ಅಪಾರ ನಂಬಿಕೆ. ಅದಕ್ಕೋಸ್ಕರ ಈ ದೀರ್ಘಾವಧಿ ಕಾರ್ಯ ಎಸಗುವ ಗರ್ಭ ನಿರೋಧಕ ಚುಚ್ಚು ಮದ್ದುಗಳು ಸರ್ಕಾರಕ್ಕೆ ಹೆಚ್ಚು ಸಮರ್ಪಕವಾಗಿ ಕಾಣುತ್ತದೆ. ಯಾಕೆಂದರೆ ಮೇಲ್ನೋಟಕ್ಕೆ ಇವು ಹೆಚ್ಚು ಪರಿಣಾಮಕಾರಿ ಎಂದು ತೋರುತ್ತದೆ ಜೊತೆಗೆ ಇವು ಸರಬರಾಜುದಾರರ (ಸರ್ಕಾರದ) ಹಿಡಿತದಲ್ಲಿರುತ್ತದೆ. ಐ.ಯು.ಡಿ. ಗಳಾಗಲಿ ಅಥವಾ ಮಾತ್ರೆಗಳಾಗಲೀ ಅವನ್ನು ಬಳಸುವ ಮಹಿಳೆಯರ ಹಿಡಿತದಲ್ಲಿರುತ್ತವೆ. ಪ್ರತಿದಿನ ರೇಡಿಯೋ, ಟಿ.ವಿ. ಮುಖಾಂತರ ಮಾತ್ರೆ ತೆಗೆದುಕೊಳ್ಳುವುದನ್ನು ನೆನಪಿಸಬೇಕಾಗಿಲ್ಲ. ಈ ಚುಚ್ಚು ಮದ್ದುಗಳ ಬಳಕೆ ಮಹಿಳೆಯ ಆರೋಗ್ಯಕ್ಕೆ ಸೂಕ್ತವಾಗಿಲ್ಲದಿದ್ದರೂ, ಜನನ ನಿಯಂತ್ರಣ ತರಾತುರಿಯಿಂದ ಆಗಬೇಕು ಎಂಬ ದುರಾಸೆಯಿಂದ ಕೂಡಿದ ಕಾರ್ಯ ನೀತಿ ಸೂಚಿಸುವ ಸರ್ಕಾರಕ್ಕೆ ಇದರ ಬಳಕೆ ಬಹಳ ಸೂಕ್ತವೆನಿಸುವುದನ್ನು ಪರಿಗಣಿಸಿದರೆ, ಸರ್ಕಾರಕ್ಕೆ ಮಹಿಳೆಯ ಆರೋಗ್ಯ ಮತ್ತು ಒಳಿತು ಕಟ್ಟ ಕಡೆಯ ಅಜೆಂಡಾ ಎಂದು ಮನವರಿಕೆ ಆಗುತ್ತದೆ.

### ಭಾರತದಲ್ಲಿ ಜನನ ನಿಯಂತ್ರಣ ನೀತಿ :

1951ರಲ್ಲಿ ಭಾರತ ಸರ್ಕಾರ ಪ್ರಪಂಚದ ಮೊಟ್ಟ ಮೊದಲನೆಯ ಕುಟುಂಬ ಯೋಜನೆ ಕಾರ್ಯಕ್ರಮ ಅಧಿಕೃತವಾಗಿ ಜಾರಿಗೆ ತಂದಿತು. ಈ ಯೋಜನೆಯ ಮೂಲ ಉದ್ದೇಶ ದೇಶದ ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳಬೇಕು ಎಂಬುದಾಗಿತ್ತು. ಇದಕ್ಕೆ ಮುಂಚೆ 1941ರಲ್ಲಿ ರಾಷ್ಟ್ರೀಯ ಯೋಜನಾ ಸಮಿತಿಯು ದೇಶದ ಬಡತನಕ್ಕೆ ಏರುತ್ತಿರುವ ಜನಸಂಖ್ಯೆಯ ಸಮಸ್ಯೆ ಕಾರಣ ಎಂದು ಗುರುತಿಸಿತ್ತು. ಈ ತಪ್ಪು ಲೆಕ್ಕಚಾರವೇ ಇಂದಿಗೂ ನಮ್ಮ ಸರ್ಕಾರಗಳ ಜನಸಂಖ್ಯೆ ನೀತಿಯ ಮೂಲ ಆಗಿದೆ. ಈ ಕಾರ್ಯಕ್ರಮವನ್ನು ಮೊದಲಿಗೆ 'ಕುಟುಂಬ ಯೋಜನೆ' ಎಂದು ಕರೆದರು ನಂತರ 'ಕುಟುಂಬ ಕಲ್ಯಾಣ' ಎಂದರು. ಆಮೇಲೆ 'ತಾಯಿ ಮತ್ತು ಮಗುವಿನ ಸುರಕ್ಷತೆ' ಎಂದು ಕರೆದರು. ಕೊನೆಗೆ ಈಗ ಈ ಕಾರ್ಯಕ್ರಮವನ್ನು ಆರ್.ಸಿ.ಹೆಚ್ (RCH) ಎಂದು ಕರೆಯುತ್ತಾರೆ. ಕಾರ್ಯಕ್ರಮಗಳ ಹೆಸರು ಏನಾದರೇನು ಇವೆಲ್ಲಾ ಕಾರ್ಯಕ್ರಮಗಳ ಮೂಲ ಉದ್ದೇಶ ಜನಸಂಖ್ಯೆ ನಿಯಂತ್ರಣಗೊಳಿಸುವುದಕ್ಕೆ ಸೀಮಿತವಾಗಿತ್ತು.

### ಜನಸಂಖ್ಯಾ ಸ್ಫೋಟ : ಸ್ಫೋಟಿಸಿದ ಕಲ್ಪನೆಗಳು :

ಜನಸಂಖ್ಯೆ ಏರುತ್ತಿರುವುದಕ್ಕೆ ಹಲವಾರು ಕಾರಣಗಳಿವೆ. ಮರಣ ಸಂಖ್ಯೆಯು ಕಡಿಮೆ ಆದಂತೆ ಜನಸಂಖ್ಯೆ ಬೆಳೆಯುತ್ತಿರುವುದು ಒಂದು ಕಾರಣ. ಶಿಶು ಮರಣ ಸಂಖ್ಯೆ ವಿಪರೀತ ಹೆಚ್ಚಾಗಿದೆ. ಪ್ರತಿ 1000 ಶಿಶುಗಳಿಗೆ 72 ಶಿಶುಗಳು ಇಂದು ಸಾವನ್ನಪ್ಪುತ್ತಿದ್ದಾರೆ. 5 ವರ್ಷಗಳಿಗಿಂತ ಕೆಳಗೆ ಇರುವ ಪ್ರತಿ 1000 ಮಕ್ಕಳಿಗೆ 100 ಮಕ್ಕಳು ಸಾವಿಗೀಡಾಗುತ್ತಿದ್ದಾರೆ. (UNFPA 1998). ತಮ್ಮ ಮಕ್ಕಳು ಉಳಿದು ಬದುಕುವ

ನಂಬಿಕೆ ಕುಟುಂಬಕ್ಕೆ ಇಲ್ಲದಿರುವುದು ಈ ಅಂಶದಿಂದ ತಿಳಿಯುತ್ತದೆ. ಶಿಶು ಮರಣ ಸಂಖ್ಯೆಯು ಕಡಿಮೆಯಾದಲ್ಲಿ ಜನನ ಸಂಖ್ಯೆಯು ಪರಿಣಾಮಕಾರಿಯಾಗಿ ಕಡಿಮೆ ಆಗಬಹುದು. ಬದುಕುತ್ತಿರುವ ಮಟ್ಟ, ಮಹಿಳೆಯ ಶಿಕ್ಷಣದ ಸ್ಥಿತಿಗತಿ, ಕುಟುಂಬ ರಚನೆ, ದುಡಿಯುವ ವರ್ಗಕ್ಕೆ ಮಹಿಳೆಯ ಸೇರ್ಪಡೆ ಇವೆಲ್ಲವೂ ಕೂಡ ಜನಸಂಖ್ಯೆಯು ಹೆಚ್ಚಾಗುವುದಕ್ಕೆ ಮುಖ್ಯ ಕಾರಣ ಎಂದಿದ್ದಾರೆ ಡೆಮೋಗ್ರಾಫರ್ಸ್ (ಜನಾಂಗ ಸ್ಥಿತಿ ವಿವರಣೆ ನೀಡುವವರು). ಗರ್ಭ ನಿರೋಧಕಗಳಿಂದ ಜನನ ನಿಯಂತ್ರಿಸುವುದು ಕೇವಲ ಒಂದು ವಿಧಾನ ಮಾತ್ರ. ಆದರೂ ಸರ್ಕಾರವು ಹಾನಿಕಾರಕವಾದ ಗರ್ಭನಿರೋಧಕಗಳನ್ನು ಮಹಿಳೆಯರು ಉಪಯೋಗಿಸುವಂತೆ ಕಾರ್ಯ ನಿರೂಪಿಸುತ್ತಿರುವುದು ವಿಷಾದನೀಯ. ಜನಸಂಖ್ಯೆ ಹೆಚ್ಚುತ್ತಿರುವುದು ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಕಾರಣಗಳಿಂದ ಎಂಬ ಅಂಶವನ್ನು ಸರ್ಕಾರ ಮರೆಮಾಚಿ ಈ ಮೇಲಿನ ಕಾರ್ಯಕ್ರಮಗಳನ್ನು ರೂಪಿಸುತ್ತಿದೆ.

ಭೂಸುಧಾರಣೆ ಮಾಡುವುದು, ಸಾಮಾಜಿಕ ಸೇವೆಗಳನ್ನು ವ್ಯಾಪಕಗೊಳಿಸುವುದು, ದೇಶದ ಸಂಪನ್ಮೂಲಗಳ ಸಮಾನ ಹಂಚಿಕೆ ಮೊದಲಾದ ಹತ್ತು ಹಲವಾರು ಸವಾಲುಗಳನ್ನು ಎದುರಿಸುವುದರಿಂದ ದೇಶದ ಪ್ರಗತಿಯಾಗುತ್ತದೆಯೇ ಹೊರತು ಜನನ ನಿಯಂತ್ರಣ ಕಾರ್ಯಕ್ರಮ ಒಂದೇ ದೇಶದ ಪ್ರಗತಿಗೆ ಮೊದಲನೆಯ ಹೆಜ್ಜೆ ಎಂದು ತಿಳಿದುಕೊಳ್ಳುವುದು ಸರ್ಕಾರಕ್ಕೆ ಸುಲಭ ಮತ್ತು ಆಕರ್ಷಕ ಕೂಡ. ಗರ್ಭ ನಿರೋಧಕಗಳನ್ನು ಆಯ್ಕೆ ಮಾಡಿಕೊಳ್ಳುವ ನಿರ್ಧಾರ ಮಹಿಳೆಯರಿಗೆ ಬಿಡದೆ ಹಾನಿಕಾರಕ ಚುಚ್ಚುಮದ್ದುಗಳನ್ನು ಬಲವಂತವಾಗಿ ಮಹಿಳೆಯರ ಮೇಲೆ ಹೇರಿ ಸಂದರ್ಭದ ಸಂಪೂರ್ಣ ಹತೋಟಿಯನ್ನು ಸರ್ಕಾರ ತನ್ನ ಕಬಂಧ ಬಾಹುಗಳಲ್ಲಿ ಹಿಡಿದಿಟ್ಟುಕೊಳ್ಳುವ ಹುನ್ನಾರ ನಡೆಸಿದೆ. ಸರ್ಕಾರದ ಈ ನಿರ್ಧಾರಕ್ಕೆ ವಿಶ್ವಬ್ಯಾಂಕಿನ ಒತ್ತಡ ಇದೆ. ಈ ಚುಚ್ಚುಮದ್ದುಗಳು ಸುರಕ್ಷಿತ ಮತ್ತು ಪರಿಣಾಮಕಾರಿಯಾದ್ದರಿಂದ, ನೀಡುವಾಗ ಜಾಗ್ರತೆ ವಹಿಸಿ, ಸುರಕ್ಷಿತ ಕ್ರಮಗಳನ್ನು ಅನುಸರಿಸಿ, ಎಚ್ಚರಿಕೆ ವಹಿಸಿ ತದನಂತರ ನಿರಂತರವಾಗಿ ನಿಗಾವಹಿಸುವುದರಿಂದ ಈ ಪದ್ಧತಿಯನ್ನು ಕಾರ್ಯಕ್ರಮಗಳಲ್ಲಿ ಬಳಸಿಕೊಳ್ಳುವುದು ಸೂಕ್ತ ಎಂದು ವಿಶ್ವಬ್ಯಾಂಕ್ ಹೇಳಿಕೆ ನೀಡಿದೆ. ಈ ರೀತಿಯಾದ ಸಲಹೆ ನೀಡಿರುವ ವಿಶ್ವಬ್ಯಾಂಕಿಗೆ ಭಾರತ ಸರ್ಕಾರದ ಆರೋಗ್ಯ ವ್ಯವಸ್ಥೆಯು ಸ್ಥಿತಿಗತಿಗಳ ಬಗ್ಗೆ, ನಿಗಾ ವಹಿಸದಂತಹ ಕಠಿಣ ವ್ಯವಸ್ಥೆಯು ಪ್ರಸ್ತುತ ಭಾರತದಲ್ಲಿ ಇಲ್ಲದಿರುವುದರ ಬಗ್ಗೆ ಅರಿವಿರಬೇಕಾಗಿತ್ತು. ಅರಿವಿದ್ದೂ ಈ ರೀತಿ ಸಲಹೆ ಮಾಡಿದರೆ ಬೇಜವಾಬ್ದಾರಿ ಕೆಲಸ ಮಾಡಿದಂತೆ ಆಗುತ್ತದೆ.

ಈ ಗರ್ಭನಿರೋಧಕ ಚುಚ್ಚು ಮದ್ದುಗಳಿಂದ ಆಗುವ ದುಷ್ಪರಿಣಾಮಗಳು :

ಈ ಗರ್ಭನಿರೋಧಕ ಬಳಸುವುದರಿಂದ ಆಗುವ ದುಷ್ಪರಿಣಾಮಗಳನ್ನು ಎರಡು ರೀತಿಯಲ್ಲಿ ನೋಡಬಹುದು.

1. ಚುಚ್ಚುಮದ್ದು ತೆಗೆದುಕೊಂಡ ಅಲ್ಪಾವಧಿಯಲ್ಲಿ ಕಂಡು ಬರುವ ದುಷ್ಪರಿಣಾಮ.
2. ಎರಡು ಮಕ್ಕಳ ಮಧ್ಯೆ ಕಾಲಾವಧಿ ನೀಡಲು ಕನಿಷ್ಟ 2 ರಿಂದ 3 ವರ್ಷಗಳು ಇದನ್ನು ನಿರಂತರವಾಗಿ ಬಳಸುವುದರಿಂದ ಉಂಟಾಗುವ ದೀರ್ಘಾವಧಿ ದುಷ್ಪರಿಣಾಮ.

ಮುಟ್ಟಿನಲ್ಲಿ ಏರುಪೇರು : ಇದರ ಬಳಕೆಯಿಂದ ಅತಿ ಸಾಮಾನ್ಯವಾದ ತೊಂದರೆ ಎಂದರೆ ಮುಟ್ಟಿನಲ್ಲಿ ಕಂಡು ಬರುವ ನ್ಯೂನತೆಗಳು. ವಿಪರೀತ ರಕ್ತಸ್ರಾವ, ಮುಟ್ಟಿನ ದಿನಗಳು ಹೆಚ್ಚುವುದು, ಮೇಲಿಂದ ಮೇಲೆ ರಕ್ತಸ್ರಾವ ಕಾಣಿಸಿಕೊಳ್ಳುವುದು, ಇದರಿಂದ ಉಂಟಾಗುವ ರಕ್ತ ಹೀನತೆ ಇತ್ಯಾದಿ.

ಹೃದಯಕ್ಕೆ ಸಂಬಂಧಪಟ್ಟ ಕಾಯಿಲೆಗಳು : ರಕ್ತನಾಳಗಳು ಉಬ್ಬಿಕೊಂಡು ರಕ್ತ ಸಂಚಾರವು ಸಮರ್ಪಕವಾಗಿ ಆಗದೇ ಇರುವುದರಿಂದ ಹೃದಯಕ್ಕೆ ಸಂಬಂಧಪಟ್ಟ ಮತ್ತು ಪಾರ್ಶ್ವವಾಯುಗಳಂತ ಕಾಯಿಲೆಗೆ ತುತ್ತಾಗಬಹುದು.

ಥ್ರಾಂಬೊಎಂಬಲಿಸಮ್ : ರಕ್ತ ಹೆಪ್ಪುಗಟ್ಟುವುದರಿಂದ ಹೃದಯಕ್ಕೆ ಮತ್ತು ಪಾರ್ಶ್ವವಾಯುಗಳಂತಹ ಕಾಯಿಲೆಗೆ ಒಳಪಡುವುದು ಖಚಿತ.

ಒಸ್ಟಿಯೋ ಪೋರೋಸಿಸ್ : ಭಾರತದಲ್ಲಿ ಹೆಚ್ಚು ಹೆಚ್ಚು ಮಹಿಳೆಯರು ಮೂಳೆಗೆ ಸಂಬಂಧ ಪಟ್ಟ ಕಾಯಿಲೆಯಿಂದ ನರಳುತ್ತಿರುವುದು ಹೈದರಾಬಾದಿನಲ್ಲಿ ನಡೆಸಿದ ಒಂದು ಅಧ್ಯಯನದಿಂದ ಬೆಳಕಿಗೆ ಬಂದಿದೆ. ಈ ಕಾಯಿಲೆಯಿಂದ ಮೂಳೆಗಳು ತನ್ನ ಸತ್ವ ಕಳೆದುಕೊಂಡು ಬಲಹೀನವಾಗಿ ಪದೇ ಪದೇ ಮೂಳೆ ಮುರಿಯುವುದು, ಮೂಳೆಗಳ ತಿರುಚುವಿಕೆ ಮುಂತಾದ ಮೂಳೆಗಳಿಗೆ ಸಂಬಂಧಪಟ್ಟ ಕಾಯಿಲೆಗಳಿಗೆ ಒಳಗಾಗುವ ಸಾಧ್ಯತೆ ಇರುತ್ತದೆ.

ದೈಹಿಕ ತೂಕದಲ್ಲಿ ಏರುಪೇರು : ಈ ಚುಚ್ಚುಮದ್ದುಗಳನ್ನು ಬಳಸುವುದರಿಂದ ತೂಕ ಹೆಚ್ಚಾಗುವುದು ಸಾಮಾನ್ಯವಾಗಿ ಕಂಡು ಬಂದರೂ ಸಾಕಷ್ಟು ಮಹಿಳೆಯರು (ಶೇ. 2 ರಿಂದ 4) 5 ಕೆಜಿಗಳಷ್ಟು ತೂಕ ಕಳೆದುಕೊಂಡಿರುವುದು ಕಂಡು ಬಂದಿದೆ. ದೇಹದ ತೂಕ ಅಗತ್ಯಕ್ಕಿಂತ ಇದ್ದಕ್ಕಿದ್ದಂತೆ ಕಡಿಮೆ ಆಯಿತೆಂದರೆ ಇಲ್ಲದ ರೋಗಗಳನ್ನು ಆಹ್ವಾನಿಸಿದಂತೆ. ಇದರಿಂದ ಕೆಲಸ ಮಾಡಲು ಸುಸ್ತು, ನಿರುತ್ಸಾಹ, ಆಲಸ್ಯ ಮತ್ತು ಸಂಕಟಗಳು ಉಂಟಾಗುತ್ತವೆ. ಈ ಪರಿಸ್ಥಿತಿಯಲ್ಲಿ ಮಹಿಳೆ ಮತ್ತೆ ಗರ್ಭ ಧರಿಸಲು ಇಚ್ಛಿಸಿದರೆ ತನಗೆ ಮತ್ತು ಹುಟ್ಟುವ ಮಗುವಿಗೆ ಅಪಾಯದ ಸಂಭವವಿರುತ್ತದೆ.

ಕ್ಯಾನ್ಸರ್ : ಈ ಗರ್ಭನಿರೋಧಕ ಚುಚ್ಚುಮದ್ದುಗಳ ಬಳಕೆಯಿಂದ ಕ್ಯಾನ್ಸರಿಗೆ ತುತ್ತಾಗುವ ವಿಷಯದಲ್ಲಿ ಹಲವಾರು ವರ್ಷಗಳಿಂದ ವಾದವಿವಾದಗಳಿವೆ. ಇದನ್ನು ಪ್ರಾಣಿಗಳ ಮೇಲೆ ಪ್ರಯೋಗಿಸಿದಾಗ ಕ್ಯಾನ್ಸರ್ ಗಡ್ಡೆಗಳು ಬೆಳೆದಿದೆ ಎಂದು ಅಧ್ಯಯನದ ವರದಿಯು ಖಚಿತಪಡಿಸಿವೆ.

ದೀರ್ಘಾವಧಿ ಕಾರ್ಯವೆಸಗುವ ಈ ಗರ್ಭ ನಿರೋಧಕ ಚುಚ್ಚುಮದ್ದುಗಳನ್ನು ಮಹಿಳಾ ಸಂಘಟನೆಗಳು ಈ ಕಾರಣಗಳಿಗಾಗಿ ವಿರೋಧಿಸುತ್ತವೆ.

1. ಇಡೀ ದೇಹದ ಮೇಲೆ ದುಷ್ಪರಿಣಾಮ ಬೀರುವುದರಿಂದ ಅವು ಆಕ್ರಮಣಕಾರಿ.
2. ಹಲವಾರು ದುಷ್ಪರಿಣಾಮಗಳಿಗೆ ಮಹಿಳೆ ಒಳಗಾಗುವುದರಿಂದ ಅವು ಹಾನಿಕಾರಕ.
3. ಅಂತರ್ಗತ ಲಕ್ಷಣಗಳಿಂದ ಕೂಡಿದ ಇವುಗಳು ಬೀರುವ ಪರಿಣಾಮದಿಂದ ಒಮ್ಮೆಲೆ ಹೊರಬರಲಾಗುವುದಿಲ್ಲ. ಅವು ದೀರ್ಘಾವಧಿ ಕಾರ್ಯವೆಸಗುವಂತಹವು.
4. ಎರಡು ಮಕ್ಕಳ ನಡುವೆ ಅಂತರ ನೀಡಲು ಬಳಸುವಂತಹ ಪದ್ಧತಿಯಿಂದ ಮರು ಗರ್ಭಧಾರಣೆ ಆಗುವ ಬಗ್ಗೆ ಭರವಸೆ ಇಲ್ಲ. ಮೊಲೆ ಹಾಲು ಕುಡಿಯುವ ಮಕ್ಕಳಿಗೆ ಅಪಾಯದ ಸಂಭವ ಇದೆ.
5. ಇವು ಸರಬರಾಜುದಾರರ ಮತ್ತು ಆರೋಗ್ಯ ವ್ಯವಸ್ಥೆಯಲ್ಲಿರುವ ದಾಯಿ, ನರ್ಸ್ ಮತ್ತು ವೈದ್ಯರ ಸಂಪೂರ್ಣ ಹಿಡಿತದಲ್ಲಿರುತ್ತವೆ.
6. ಉತ್ತಮ ಆರೋಗ್ಯ ವ್ಯವಸ್ಥೆಯ ಕೊರತೆ ಇರುವುದರಿಂದ ಇದನ್ನು ನೀಡುವಾಗ ತೀರಾ ಎಚ್ಚರಿಕೆ ವಹಿಸಬೇಕಾಗುತ್ತದೆ. ಅನಂತರವೂ ನಿರಂತರವಾಗಿ ನಿಗಾ ವಹಿಸಬೇಕಾಗುತ್ತದೆ.
7. ಮಹಿಳೆಯ ಆರೋಗ್ಯಕ್ಕೆ ಹೆಚ್ಚು ಗಮನ ಕೊಡುವುದಕ್ಕಿಂತ ಲಾಭಕೋರ ಔಷಧೀಯ ಕಂಪನಿಗಳ ದುರಾಸೆಯೇ ಹೆಚ್ಚಾಗಿರುವುದರಿಂದ.

ಮಹಿಳೆಯರನ್ನು ಹೆರುವ ಯಂತ್ರಗಳಂತೆ ಭಾವಿಸುವುದು ತಪ್ಪು. ಮಹಿಳೆಗೆ ತನ್ನ ಸಂತಾನೋತ್ಪತ್ತಿಯನ್ನು ಹಿಡಿತದಲ್ಲಿಟ್ಟುಕೊಳ್ಳುವ ಬಯಕೆ ಇರುತ್ತದೆ. ಮಹಿಳಾ ಸಂಘಟನೆಗಳು ಸುರಕ್ಷಿತ, ಪರಿಣಾಮಕಾರಿಯಾದ ಗರ್ಭನಿರೋಧಕಗಳನ್ನು ಬಳಸಲು ಪ್ರಚಾರ ಮಾಡುತ್ತಿವೆ. ಆಕ್ರಮಣಕಾರಿಯಲ್ಲದ, ಹಾನಿಕಾರಕವಲ್ಲದ, ಸುರಕ್ಷಿತವಾಗಿ, ಪರಿಣಾಮಕಾರಿಯಾಗಿ ಗರ್ಭ ನಿಯಂತ್ರಿಸುವಂತಹ ಪದ್ಧತಿಗಳಲ್ಲಿ ನಿರೋಧ್, ಡಯಾಫ್ರಮ್, ಸರ್‌ವೈಕಲ್ ಕ್ಯಾಪ್ ಇವೆ. ಇವುಗಳಲ್ಲಿ ಡಯಾಫ್ರಮ್ ಮತ್ತು ಸರ್‌ವೈಕಲ್ ಕ್ಯಾಪ್‌ಗಳು ಭಾರತದ ಮಾರುಕಟ್ಟೆಗಳಲ್ಲಿ ದೊರೆಯುವುದಿಲ್ಲ. ಇವುಗಳನ್ನು 2-3 ವರುಷ ಪದೇ ಪದೇ ಉಪಯೋಗಿಸಬಹುದಾದ್ದರಿಂದ (ಯಾವುದೇ ಔಷಧೀಯ ಕಂಪನಿ ಲಾಭ ಮಾಡಿಕೊಳ್ಳಲಾಗುವುದಿಲ್ಲ) ಇವು ಬಹಳ ಅಗ್ಗ. ಮಹಿಳೆಯ ಬಸಿರು ತಡೆಗಟ್ಟುವಲ್ಲಿ ಪುರುಷರ ಜವಾಬ್ದಾರಿ ಕೂಡ ಮುಖ್ಯ. ಆದ್ದರಿಂದ ಪುರುಷರು ಉಪಯೋಗಿಸುವಂತಹ ಪದ್ಧತಿಗಳು ಬೆಳಕಿಗೆ ಬರಬೇಕು.

- ಸವಿತಾ. ಎ.

# ''ಹಣ ನೀಡಿ - ಚಿಕಿತ್ಸೆ ಪಡೆ'' - ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿಯ ಬಗ್ಗೆ ಒಂದು ವಿಮರ್ಶೆ

ಆರೋಗ್ಯ ಬದುಕಿನ ಹಕ್ಕು ನಾಗರೀಕರಾಗಿ ನಿಮಗೆ ಗ್ಯಾರಂಟಿಯಾಗಿ ಇದೆಯೆಂದು ನೀವು ಭಾವಿಸಿರುವಿರೆಂದರೆ ನೀವು ಮತ್ತೊಮ್ಮೆ ಯೋಚಿಸಬೇಕಾಗಿದೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಯೋಜನೆಯ ಮಂತ್ರಿ ಮಂಡಲದ ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿಯ ಪ್ರಕಾರ ಹೋಗುವುದಾದಲ್ಲಿ ಈ ದೇಶದ ಮಿಲಿಯಾಂತರ ಜನರಿಗೆ ಇದು ಹೋರಾಟವಾಗುತ್ತದೆಯೇ ಹೊರತು ಆರೋಗ್ಯದ ಬಗೆಗಿನ ಹಕ್ಕಾಗಿರುವುದಿಲ್ಲ. 2001 ರ ಆಕ್ಟೋಬರ್‌ನಲ್ಲಿ ಬಿಡುಗಡೆಗೊಂಡ ಈ ಕರಡು ಪ್ರತಿಯ ಯೋಜನೆಯು ಹಣ ನೀಡಿ - ಚಿಕಿತ್ಸೆ ಪಡೆಯಿರಿ ಎಂಬ ನಿಲುವಿಗೆ ಸರಕಾರ ಹಸಿರು ನಿಶಾನೆ ತೋರಿಸುವ ಮೂಲಕ ಆರೋಗ್ಯ ಸೇವೆಯ ನಿರ್ಧಾಕ್ಷಿಣ್ಯ ಖಾಸಗೀಕರಣದ ಹೊಸ ಯುಗವನ್ನು ಪ್ರಾರಂಭಿಸಲಿದೆ.

ಕಳೆದ ಆರೋಗ್ಯ ಯೋಜನೆ ಬಿಡುಗಡೆಯ (ರಾ.ಆ.ಯೋ.1983) ನಂತರದಲ್ಲಿ ಹೆಚ್ಚು ಕಡಿಮೆ ಎರಡು ದಶಕ ಕಾಲ ಮೌನದ ನಂತರ ಬಿಡುಗಡೆಯಾದ ಈ ರಾ.ಆ.ಯೋ. ಕರಡು ಪ್ರತಿ ಹಲವಾರು ಕಾರಣಗಳಿಂದ ಮುಖ್ಯವಾಗುತ್ತದೆ.

ಇದು ಸಾರ್ವತ್ರಿಕ ಆರೋಗ್ಯ ಕಾಳಜಿಯ ಗುರಿಯನ್ನು ಕೈ ಬಿಟ್ಟಿದೆ.

80% ಆರೋಗ್ಯ ಸೇವೆಗಳು ಇಂದು ಖಾಸಗಿಯವರ ಕೈಯಲ್ಲಿದೆ ಎಂಬ ವಿಚಾರವನ್ನು ನಿರ್ಲಕ್ಷಿಸುವ ಇದು ಸಾರ್ವಜನಿಕ ಆರೋಗ್ಯ ಸೇವೆಯ ವಿಫಲತೆಯನ್ನು ಖಡಾಖಂಡಿತವಾಗಿ ಖಂಡಿಸುತ್ತದೆ.

ಖಾಸಗೀಕರಣದ ಸುವ್ಯವಸ್ಥೆಗೆ ಒಂದು ಪರಿಹಾರ ಕ್ರಮ ಸೂಚಿಸದ ಇದು ಖಾಸಗೀಕರಣವನ್ನು ಇನ್ನೂ ಹೆಚ್ಚು ಬೆಂಬಲಿಸುತ್ತದೆ

ಸಂಬಂಧಿಸಿದ ಸಮಸ್ಯೆಗಳಾದ ಆಹಾರ, ನೀರು, ಸ್ವಚ್ಛತೆಗಳ ಬಗ್ಗೆ ಮಾತನಾಡದೆ ಇದು ಆರೋಗ್ಯದ ಬಗ್ಗೆ ಬಯೋಮೆಡಿಕಲ್ ನಿಲುವನ್ನು ಅಳವಡಿಸಿದೆ.

W.T.O. ಹಾಗೂ ಟ್ರಿಪ್ಸ್‌ಗಳ ಸಂಧರ್ಭದಲ್ಲಿ ಒಟ್ಟಾಗಿ ಇರಬೇಕಾದ ಔಷಧಿಗಳ ಯೋಜನೆಯ ಬಗ್ಗೆ ಮಾತನಾಡದೇ ಇದು ಸಂಪೂರ್ಣವಾಗಿ ಮೌನ ವಹಿಸಿದೆ.

ಇದು ಮಹಿಳಾ ಆರೋಗ್ಯದ ಮೂಲಭೂತ ಕಾಳಜಿಗಳನ್ನು ಸಹ ಗಮನಿಸುವಲ್ಲಿ ಸೋತಿರುವುದಲ್ಲದೇ ಮುಖ್ಯ ವಿಚಾರಗಳಾದ ಮಕ್ಕಳ, ವಯಸ್ಕರ ಹಾಗೂ ವಯಸ್ಸಾದವರ ಆರೋಗ್ಯದ ಬಗ್ಗೆ ಸಂಪೂರ್ಣವಾಗಿ ಮೌನವಹಿಸಿದೆ.

ಈ ಮುಖ್ಯ ಅಂಶಗಳ ಹಿನ್ನಲೆಯಲ್ಲಿ ನೋಡಿದಾಗ ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿ ಭಾರತದಂತಹ ಜನರ ಆರೋಗ್ಯ ಪ್ರಶ್ನೆಯನ್ನು ತಾವೆಷ್ಟು ಹಣ ಮಾಡಬಹುದು ಎಂಬ ಹಿನ್ನಲೆಯಲ್ಲಿ ಯೋಚಿಸುವ ಅಂತರ್ ರಾಷ್ಟ್ರೀಯ ಕಂಪನಿಗಳಿಗೆ ಹಾಗೂ ಖಾಸಗೀಕರಣದ ಪರವಾಗಿರುವವರಿಗೆ ಮಾರಿಕೊಳ್ಳುವಂತಿದೆ ಎಂದು ಹಲವಾರು ಜನ ಅರ್ಥ ಮಾಡಿಕೊಳ್ಳುತ್ತಿರುವಲ್ಲಿ ಆಶ್ಚರ್ಯ ಪಡಬೇಕಾದುದೇನೂ ಇಲ್ಲ.

ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿಯ ಮುಖ್ಯ ಅಂಶಗಳನ್ನು ನಾವು ವಿವರವಾಗಿ ನೋಡೋಣ.

'ಸಾರ್ವತ್ರಿಕ ಆರೋಗ್ಯ ಕಾಳಜಿ' - ಹಾಗೆಂದರೇನು?

1983 ರ ಆರೋಗ್ಯ ಯೋಜನೆಯಲ್ಲಿ ಸಾರ್ವಜನಿಕ ಆರೋಗ್ಯದ ಬಗೆಗಿನ ಬದ್ಧತೆ ಹಾಗು ಕಾಳಜಿಯನ್ನು ಈಗಿನ ರಾ.ಆ.ಯೋಜನೆ ಕರಡು ಪ್ರತಿಯಲ್ಲಿ ಕೈ ಬಿಡಲಾಗಿದೆ. 1978 ರಲ್ಲಿ ನೂರಾರು ದೇಶಗಳು ಸಹಿ ಮಾಡಿದ 'ಅಲ್ಮಾ ಅಟಾ' ಡಿಕ್ಲರೇಷನ್‌ನಿಂದ ಈ ಬದ್ಧತೆಯನ್ನು ಅಳವಡಿಸಲಾಗಿತ್ತು. ಸಹಿಮಾಡಿದ ದೇಶಗಳಲ್ಲೊಂದಾದ ಭಾರತ 2000ದ

ವರ್ಷದಲ್ಲಿ 'ಎಲ್ಲರಿಗೂ ಆರೋಗ್ಯ' ಸೇವೆ ಸಲ್ಲಿಸುವದಕ್ಕೆ ಬದ್ಧವಾಗಿತ್ತು.

2000 ವರ್ಷ - ಬಂದು ಹೋಗಿದೆ ಅಷ್ಟೇ - 'ಎಲ್ಲರಿಗೂ ಆರೋಗ್ಯ' ದ ಮಾತಿನ ಸುಳಿವೇ ಇಲ್ಲ. ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿಯಲ್ಲಿ ಈ ವಿಚಾರವನ್ನೇ ಕೈಬಿಡುವುದರ ಮೂಲಕ ಈ ವಿಚಾರದಲ್ಲಿ ತಮ್ಮ ಮಜುಗರವನ್ನು ಮುಚ್ಚಿ ಹಾಕಲು ಪ್ರಯತ್ನಿಸಿದ್ದಾರೆ. ನಿಜವೇನೆಂದರೆ 24 ಪುಟಗಳ ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿಯಲ್ಲಿ ಒಂದು ಬಾರಿ ಕೂಡಾ 'ಸಾರ್ವತ್ರಿಕ' ಅಥವಾ 'ಅರ್ಥವತ್ತಾದ' ಎಂಬ ಪದಗಳು ಒಮ್ಮೆಯೂ ಕೂಡಾ ಬಳಕೆಯಾಗಿಲ್ಲ. ಈ ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿಯನ್ನು ಟೀಕಿಸುತ್ತಾ ಜಾಗತಿಕ ಆರೋಗ್ಯ ಸಂಸ್ಥೆಯು ಈ ಕರಡು ಪ್ರತಿಯ 1983ರ ಆರೋಗ್ಯ ಯೋಜನೆಯ ನಿರೀಕ್ಷಿತ ಆಶಯಗಳ ಚಿಂತನೆಯಿಂದ ಲಾಭ ಪಡೆಯಬಹುದಾಗಿದೆ ಎಂದು ವಿನಮ್ರವಾಗಿ ಸೂಚಿಸಿತ್ತು. ಆದರೆ ಈ ಕರಡು ಪ್ರತಿಯ ಮೇಲು ನೋಟದ ಓದಿನಲ್ಲಿಯೇ - ನಮಗೆ ಖಾತ್ರಿಯಾಗುವ ವಿಚಾರವೆಂದರೆ, 'ಎಲ್ಲರಿಗೂ ಆರೋಗ್ಯದ' ಆಶಯದ ಮಾತಿರಲಿ, ಇದು ಮೊದಲ ಆರೋಗ್ಯ ಯೋಜನೆಯಿಂದ ಕೂಡಾ ಸರಿದಿರುವುದು. ಆ ಕಾಳಜಿಗಳನ್ನು ಸಹ ಒಳಗೊಳ್ಳದೇ ಇರುವುದು ಅರ್ಥವಾಗುತ್ತದೆ.

'ಎಲ್ಲರಿಗೂ ಆರೋಗ್ಯ' ದಿಂದ 'ಹಣ ಕೊಡಬಲ್ಲ - ಎಲ್ಲರಿಗೂ ಆರೋಗ್ಯ' ದತ್ತ :

ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿ ಸೆಕೆಂಡರಿ ಹಾಗೂ ಟೆರಿಟೆರಿ ಆರೋಗ್ಯದ ಕಾಳಜಿಗೆ ಗ್ರಾಹಕರ ಫೀಸನ್ನು ಸರಕಾರಿ ಬಡತನದ ರೇಖೆಯ ಮೇಲಿರುವವರಿಂದ ಪಡೆಯಬಹುದು ಎಂದು ಸೂಚಿಸುತ್ತದೆ. ಬಡತನದ ಬೇಗೆಯಲ್ಲಿ ಬೇಯುವ ನಮ್ಮಂತಹ ದೇಶಗಳಲ್ಲಿ, ಕೆಲವು ಸಂದರ್ಭದಲ್ಲಿ ಆಸ್ಪತ್ರೆಯ ಖರ್ಚುಗಳೇ ಅನಾರೋಗ್ಯದಿಂದ ನರಳುತ್ತಿರುವ ವ್ಯಕ್ತಿಯನ್ನು ಬಡತನ ರೇಖೆಯ ಕೆಳಗೆ ನೂಕುವ ಸಾಮರ್ಥ್ಯ ಹೊಂದಿರುತ್ತವೆ ಎಂಬುದನ್ನು ಹೇಳಲು ನೈಪುಣ್ಯರ ಅಭಿಪ್ರಾಯವನ್ನೇನೂ ಕೇಳಬೇಕಾಗಿಲ್ಲ. ಉಚಿತ ಸಾರ್ವಜನಿಕ ಆರೋಗ್ಯ ಸೇವೆಯನ್ನು ಕಡಿತಗೊಳಿಸುವಂತಹ ಶಿಫಾರಸ್ಸು ಮಾತ್ರ ಆರೋಗ್ಯ ಹಕ್ಕಿನಿಂದ ಹಣ ನೀಡಿ - ಚಿಕಿತ್ಸೆ ಪಡೆಯುವತ್ತ ಕರಡು ಪ್ರತಿ ಸಾಗಿರುವುದಕ್ಕೆ ಸಾಕ್ಷಿಯಲ್ಲ. ಇನ್ನೂ ಅನೇಕ ಇಂತಹ ಸಾಕ್ಷಿಗಳನ್ನು ನಾವು ಇಲ್ಲಿ ಗಮನಿಸಬಹುದಾಗಿದೆ.

ಬೇರೆ ದೇಶಗಳಿಂದ ಬರುವ ರೋಗಿಗಳಿಗೆ ವ್ಯವಹಾರಿಕ ವೈದ್ಯಕೀಯ ಸೇವೆಯನ್ನು ಪ್ರೋತ್ಸಾಹಿಸುವುದಕ್ಕಾಗಿ, ಈ ಮೂಲಕ ಫಾರಿನ್ ಎಕ್ಸ್‌ಚೇಂಜ್ ಪಡೆಯುವ ಖಾಸಗಿ ಆಸ್ಪತ್ರೆಗಳಿಗೆ ಹಣಕಾಸಿನ ಬೋನಸ್ ನೀಡಲಾಗುವುದು, ಖಾಸಗಿ ವೈದ್ಯಕೀಯ ಸಂಶೋಧನೆಯನ್ನು ಪ್ರೋತ್ಸಾಹಿಸುವುದು, ಖಾಸಗಿ ಆರೋಗ್ಯ ವಿಮಾ ಕಂಪನಿಗಳು ಅಂಗಡಿ ತೆರೆಯಲು ಪ್ರೋತ್ಸಾಹಿಸುವುದು, (ಇತ್ತೀಚೆಗೆ ಎಷ್ಟೊಂದು ಖಾಸಗಿ ವಿಮಾ ಕಂಪನಿಯವರ ಜಾಹಿರಾತುಗಳು, ಬೋರ್ಡ್‌ಗಳು ದೊಡ್ಡ ದೊಡ್ಡ ಪಟ್ಟಣಗಳಲ್ಲಿ ತಲೆ ಎತ್ತಿವೆ?) ಯಾಕೆ ದಿನಪತ್ರಿಕೆ ಹಾಗೂ ಪತ್ರಿಕೆಗಳು 'ಕೇರಳ - ಆರೋಗ್ಯ ಪ್ರವಾಸದ ಸ್ವರ್ಗ' ಎಂಬುದರ ಬಗ್ಗೆ ಲೇಖನ ಪ್ರಕಟಿಸುತ್ತಿವೆ ಎಂದು ನೀವು ಆಶ್ಚರ್ಯಪಟ್ಟಿಲ್ಲವೇ?

ಪ್ರಸ್ತುತದಲ್ಲಿ ಸರ್ಕಾರವು ಒಟ್ಟು ಆದಾಯದ 0.9% ನ್ನು ಆರೋಗ್ಯಕ್ಕಾಗಿ ಖರ್ಚು ಮಾಡಿದೆ. ಈ ಪ್ರಕಾರ ಒಬ್ಬ ವ್ಯಕ್ತಿಗೆ ಒಂದು ವರ್ಷಕ್ಕೆ 160 ರೂ ಮಾತ್ರ. ರಕ್ಷಣೆ, ಯುದ್ಧ ಹಾಗೂ ಅದರ ಸಂಬಂಧಿತ ಚಟುವಟಿಕೆಗಳಿಗಾಗಿ ಖರ್ಚು ಪ್ರತಿ ವರ್ಷ ಏರುತ್ತಲೇ ಇದೆ. ಹಾಗಾಗಿ ಸರ್ಕಾರ ತನ್ನ ಅನುಕೂಲಕ್ಕಾಗಿ ಜನರ ಆರೋಗ್ಯವನ್ನು ಖಾಸಗಿಯವರ ಕೈಗೆ ಜವಾಬ್ದಾರಿಯನ್ನು ತಳ್ಳುತ್ತಿದೆ. ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿ 2010 ರಲ್ಲಿ ಒಟ್ಟು ಆದಾಯದ 2% ನ್ನು ಸಾರ್ವಜನಿಕ ಆರೋಗ್ಯಕ್ಕೆ ಖರ್ಚು ಮಾಡುತ್ತೇವೆಂದು ಮಾತಿನ ಭರವಸೆ ನೀಡಿದೆ. ಈ ಅಂಕಿ ಅಂಶವು ಆರೋಗ್ಯ ಕಾರ್ಯಕರ್ತೆಯೋರ್ವರು ಹೇಳುವ ಪ್ರಕಾರ ಜಾಗತಿಕ ಆರೋಗ್ಯ ಸಂಸ್ಥೆ ಯಾವುದೇ ದೇಶಕ್ಕೆ ಶಿಫಾರಸ್ಸು ಮಾಡಿದ ಕನಿಷ್ಠಕ್ಕಿಂತ 5 % ಕಡಿಮೆಯಾಗಿದೆ.

ಆರೋಗ್ಯ ಸೇವೆಗಳಿಂದ ಸರ್ಕಾರ ಹಿಂತೆಗೆದ ಕಾರಣದಿಂದಾಗಿ ಈಗಾಗಲೇ 80 ರಷ್ಟು ಆರೋಗ್ಯ ಸೇವೆಗಳು ನಮ್ಮ ದೇಶದಲ್ಲಿ ಖಾಸಗಿಯವರ ಕೈಯಲ್ಲಿ ಇವೆ. ಖಾಸಗಿ ಡಾಕ್ಟರಗಳನ್ನು ನಿಯಂತ್ರಿಸುವ ಯಾವುದೇ ವಿಧಾನಗಳು ಇಲ್ಲದೇ ಇರುವುದರಿಂದ ಅವರು ರೋಗಿಗಳ ರಕ್ತವನ್ನು ಹೀರತೊಡಗಿದ್ದಾರೆ. ಕಿಡ್ನಿ ಬದಲಾಯಿಸುವಿಕೆ, ಹೆಣ್ಣು ಭ್ರೂಣ ಹತ್ಯೆಯಂತಹ ರಾಕೆಟ್‌ಗಳು ಖಾಸಗಿ ವೈದ್ಯಕೀಯ

ಸೇವೆಯ ಹೆಸರಿನಲ್ಲಿ ನಡೆಯುವ ಅತಿರೇಕದ ಚಟುವಟಿಕೆಗಳಿಗೆ ಸಾಕ್ಷಿಯಾಗಿದೆ. ಖಾಸಗಿ ಆರೋಗ್ಯ ಸೇವೆಗಳಿಗೆ ಹಣ ನೀಡುವುದಕ್ಕಾಗಿ ಸಾಮಾನ್ಯರು ಆಸ್ತಿಯನ್ನು ಅಡವಿಡುವುದು, ರಕ್ತ ಮಾರುವುದು, ಹಸಿವೆಯಿಂದ ನರಳುವಂತಹ ವಾಸ್ತವಗಳು ನಮ್ಮ ಕಣ್ಣ ಮುಂದಿವೆ.

ಈ ನೀತಿಯನ್ನು ಹೋಗಲಾಡಿಸುವ ಬದಲು - ಸರ್ಕಾರವು ಸಾರ್ವಜನಿಕ ಆರೋಗ್ಯ ಸೇವೆಯನ್ನು ಕಡಿತಗೊಳಿಸುವುದರ ಮೂಲಕ - ಗ್ರಾಹಕರ ಫೀಸ್ ಜಾರಿಗೆ ತರುವ ಮೂಲಕ ಮಿಲಿಯಾಂತರ ಜನರ ದುಃಖವನ್ನು ಹೆಚ್ಚು ಮಾಡಿ, ಖಾಸಗೀಕರಣವನ್ನು ಬಲಗೊಳಿಸಿದೆ. ಖಾಸಗೀಕರಣದ ಚಟುವಟಿಕೆಗಳನ್ನು ನಿಯಂತ್ರಣಗೊಳಿಸುವ ಒಂದೂ ಕ್ರಮವನ್ನು ಕರಡು ಪ್ರತಿಯಲ್ಲಿ ಸೂಚಿಸಿಲ್ಲ.

ಕಾಯಿಲೆ - ಹೇಗೆ ಬರುತ್ತದೆ ? :

ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿ ರೋಗದ ಕಾರಣದ ಬಗ್ಗೆ ಸಂಪೂರ್ಣವಾಗಿ ಮೌನ ವಹಿಸಿರುವುದರಿಂದ ಆರೋಗ್ಯದ ಜೊತೆ ಹೆಣೆದುಕೊಂಡಿರುವ ನೀರು, ಸ್ವಚ್ಛತೆ, ಆಹಾರ, ಮಹಿಳೆಯ ಮೇಲಿನ ಹಿಂಸೆ - ಮುಂತಾದ ಸಮಸ್ಯೆಗಳನ್ನು ಒಟ್ಟು ಆರೋಗ್ಯ ಯೋಜನೆಯಲ್ಲಿ ಹಮ್ಮಿಕೊಳ್ಳುವಲ್ಲಿ ವಿಫಲಗೊಂಡಿದೆ.

ಒರಿಸ್ಸಾ, ಮಹಾರಾಷ್ಟ್ರ, ರಾಜಸ್ತಾನ್ ಹಾಗೂ ಕೇರಳದಲ್ಲಿ ಇಂದು ಹಸಿವಿನಿಂದಾಗಿ ಸಾವಿನ ಸಂಖ್ಯೆ ಏರುತ್ತಿರುವುದು ತಿಳಿದ ಸಂಗತಿಯಾಗಿದೆ. ನೀರಿನಿಂದ ಉಂಟಾಗುವ ಕಾಲರಾ, ಹೆಪಟೈಟಿಸ್, ಗ್ಯಾಸ್ ಟ್ರೋ ಎಂಟರಿಟೀಸ್‌ಗಳಿಂದ ಸಾವಿನ ಸಂಖ್ಯೆ ಕ್ರಮೇಣವಾಗಿ ಹೆಚ್ಚುತ್ತಲೇ ಇದೆ. ಆಹಾರದ ರಕ್ಷಣಾ ಕ್ರಮದ ಕೊರತೆ, ಸ್ವಚ್ಛ ನೀರಿನ ಕೊರತೆ ಹಾಗೂ ಬದುಕಲು ಸಹ್ಯವಾದ ವಾತಾವರಣದ ಕೊರತೆಯ ಜೊತೆಗೆ ಕಾಯಿಲೆಗಳು ಮುಖ್ಯವಾಗಿ ತಳುಕು ಹಾಕಿಕೊಂಡಿವೆ. ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿ ಇವುಗಳನ್ನು ಗಮನಿಸಿಲ್ಲ. ಜೊತೆಗೆ ಸಾರ್ವಜನಿಕ ಆರೋಗ್ಯ ಸೇವೆಯಲ್ಲಿ ಅತೃಪ್ತಿಕರ ವ್ಯವಸ್ಥೆಯನ್ನು ಬಯ್ಯುತ್ತದೆಯೇ ಹೊರತು - ಅನಾರೋಗ್ಯದ ವಿವರಣೆಯಲ್ಲಿ ಮೂಲಭೂತ ಸಂಗತಿಗಳ ಬಗ್ಗೆ ಯೋಚಿಸಿಯೇ ಇಲ್ಲ.

ಈ ಹಂತದಲ್ಲಿ ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿ ಮುಖ್ಯ ಕಾಯಿಲೆಗಳನ್ನು ಅರಿಯುವ ರಚನಾತ್ಮಕ ಕಾರ್ಯಕ್ರಮಗಳ ಅಳವಡಿಕೆಯನ್ನು ತೆಗೆದು ಹಾಕಲು ಶಿಫಾರಸ್ಸು ಮಾಡಿರುವುದು ತಮ್ಮ ಜವಾಬ್ದಾರಿಗಳಿಂದ ತಪ್ಪಿಸಿಕೊಳ್ಳುವುದಾಗಿದೆ. ಕಾಯಿಲೆಗಳನ್ನು ತಡೆಗಟ್ಟುವ ಕಾರ್ಯಕ್ರಮಗಳನ್ನು ಹಿಂತೆಗೆದುಕೊಳ್ಳುವುದಾಗಿದೆ ಎಂದು ನಾವು ತಿಳಿಯಬೇಕಾಗಿದೆ.

ಮಹಿಳೆಯ ಆರೋಗ್ಯದ ನಿರ್ಲಕ್ಷ್ಯ :

ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿ ಮಹಿಳೆಯರ ಆರೋಗ್ಯದ ಮೂಲಭೂತ ಪ್ರಶ್ನೆಯನ್ನು ಹೇಗೆ ನೋಡುತ್ತದೆ? ಉತ್ತರ ಸರಳ. ಅದು ಹೇಗೂ ನೋಡುವುದೇ ಇಲ್ಲ. ಬಡತನದ ಜೊತೆಗಿರುವ ಪಿತೃಪ್ರಾಧಾನ್ಯತೆಯ ಮಿತಿಗಳು ನಮ್ಮ ದೇಶದ ಹೆಂಗಸರನ್ನು ರೋಗಗ್ರಸ್ತರನ್ನಾಗಿ ಏನು, ಸಾವಿಗೇ ತಳ್ಳುತ್ತಿದೆ ಎಂಬುದು ಸ್ಪಷ್ಟವಾಗಿರುವ ವಿಚಾರ. ಹೆಂಗಸರ ಮೇಲಿನ ಹಿಂಸೆಯಿಂದಾಗಿ ಪ್ರತಿವರ್ಷ ಸಾವಿರಾರು ಜನರು ಸಾಯುತ್ತಿದ್ದಾರೆ. ಲಿಂಗ ಪರೀಕ್ಷೆಯ ಕೇಸುಗಳು ಹೆಚ್ಚಾಗಿವೆ. ಖಾಸಗಿ ಆಸ್ಪತ್ರೆಯಲ್ಲಿ ಹೆಣ್ಣು ಭ್ರೂಣ ಹತ್ಯೆಗಳಿಂದ ಹಣವನ್ನು ಮಿಂಟ್ ಮಾಡಲಾಗುತ್ತಿದೆ. ಇಡಿಯ ಕುಟುಂಬಕ್ಕೆ ಆಹಾರ ನೀಡಿದ ಮೇಲೆ ತಾನು ತಿನ್ನುವ ಅಭ್ಯಾಸವಿರುವ ಈ ಸಮಾಜದಲ್ಲಿ ಬಡ ಹೆಂಗಸರು ಅಶಕ್ತರಾಗಿ ನರಳುವುದಲ್ಲದೇ, ಅಪೌಷ್ಟಿಕ ಆಹಾರಗಳಿಂದ ಇತರ ರೋಗಗಳಿಗೆ ಬಲಿಯಾಗುತ್ತಿದ್ದಾರೆ. ಹಾಗಾಗಿ ಬಸರಿಯಾದ ಹೆಂಗಸು ಹೆಚ್ಚು ಅಶಕ್ತಳಾಗಿ ಬಳಲುತ್ತಾಳಲ್ಲದೇ ಮಗುವಿನ ಜನನದ ಸಂದರ್ಭದಲ್ಲಿ ಸಾವಿಗೂ ಈಡಾಗುತ್ತಾಳೆ. ದುಷ್ಪರಿಣಾಮ ಹೊಂದಿರುವ ಕುಟುಂಬ ಯೋಜನಾ ಕ್ರಮಗಳೂ ಸಹ ಹೆಂಗಸರ ಆರೋಗ್ಯದ ಮೇಲೆ ಮಾರಕ ಪರಿಣಾಮವನ್ನು ಉಂಟುಮಾಡುತ್ತವೆ. ಅನೇಕ ಮಹಿಳೆಯರಿಗೆ ಈ ದುಷ್ಪರಿಣಾಮದ ಕುಟುಂಬ ಯೋಜನೆಗಳಿಂದ ಹಾಗೂ ಅನೇಕ ಬಾರಿಯ ಹೆರಿಗೆಯಿಂದಾಗಿ ಸಾಯುವುದು ಅನಿವಾರ್ಯ ಆಯ್ಕೆಯಾಗಿಬಿಡುತ್ತದೆ.

ಮಹಿಳೆಯರ ಆರೋಗ್ಯಕ್ಕೆ ಸಂಬಂಧಪಟ್ಟ ಮುಖ್ಯ ಕಾಳಜಿಗಳು ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿಯಲ್ಲಿ ಸಂಪೂರ್ಣವಾಗಿ ನಿರ್ಲಕ್ಷಿಸಲ್ಪಟ್ಟಿವೆ. ಈ ಕರಡು ಪ್ರತಿ ಮಹಿಳೆಯರ ಮೂಲಭೂತ ಆರೋಗ್ಯದ ಬಗ್ಗೆ ಹೆಚ್ಚು

ಸವಲತ್ತುಗಳನ್ನು ಒದಗಿಸಿಕೊಡುತ್ತದೆ ಎಂದು ಹೇಳುವುದನ್ನು ಬಿಟ್ಟರೆ ಕರಡು ಪ್ರತಿ ಮಹಿಳೆಯರ ವಿಶಿಷ್ಟ ಅಗತ್ಯಗಳನ್ನು ತನ್ನ ಗುರಿಯಾಗಿ ಇಟ್ಟುಕೊಂಡೇ ಇಲ್ಲ.

W.T.O./TRIPS ಯೋಜನೆ ವಿರುದ್ಧ ಯಾವ ರಕ್ಷಣ ಕ್ರಮಗಳೂ ಇಲ್ಲ :

ಸರ್ಕಾರದ ಯೋಜನೆ ಹಾಗೂ ನಿಯಂತ್ರಣಗಳಿಂದಾಗಿ ಭಾರತ ಇಂದಿಗೂ ಔಷಧಗಳನ್ನು ಕಡಿಮೆದರದಲ್ಲಿ ಮಾರುತ್ತಿದೆ. ಫಾರ್ಮಸ್ಯುಟಿಕಲ್ಸ್ ಕಂಪನಿಗಳು ಇಂಡಿಯಾದ ಬೃಹತ್ ಜನಸಂಖ್ಯೆಯ ಕಡೆ - ಔಷಧ ಮಾರಾಟದಿಂದ ಲಾಭಗಳಿಸುವ ದೃಷ್ಟಿಯಿಂದ ನೋಡುತ್ತಿರುವ ಸಂದರ್ಭದಲ್ಲಿ W.T.O./TRIPS ಗಳ ಯೋಜನೆಗಳನ್ನು ಇಂಡಿಯಾದಲ್ಲಿ ಜಾರಿಗೆ ತರುವುದು ಅವರಿಗೆ ಅನುಕೂಲವಾಗುತ್ತದೆ. ಈಗಿನ W.T.O. ಹಾಗೂ TRIPS ವ್ಯವಸ್ಥೆಗಳ ಪ್ರಕಾರ 2005 ವರ್ಷಗಳಲ್ಲಿ ಇಂಡಿಯ ಉತ್ಪಾದನೆ ಪೇಟೆಂಟ್ ಯೋಜನೆಯ ಅಡಿ ಹೊಸ ಔಷಧಿ ಪಾಲಿಸಿಗಳತ್ತ ವಾಲುತ್ತಿದೆ. ಇದರರ್ಥ ಔಷಧಿಗಳನ್ನು ಕಡಿಮೆ ಬೆಲೆಗೆ ಮಾರುವ ನಿಯಂತ್ರಣಗಳನ್ನು ತೆಗೆದುಹಾಕುವುದು ಎಂದರ್ಥ.

ಈ ಸಂದರ್ಭದಲ್ಲಿ ಯೋಜನೆ ತಯಾರಿಸುವವರು ಉದಾರೀಕರಣದ ಸಂದರ್ಭದಲ್ಲಿ ಸಾರ್ವಜನಿಕ ಆರೋಗ್ಯ ಸೇವೆಯನ್ನು ಹೇಗೆ ರಕ್ಷಿಸಬೇಕೆಂದು ಹೇಳುವುದು ಅವಶ್ಯಕವಾಗಿದೆ. ರಾಷ್ಟ್ರೀಯ ಆರೋಗ್ಯ ಯೋಜನೆ ಈ ಕಾಳಜಿಯನ್ನು ನಾವು ಇಲ್ಲಿ ಉಲ್ಲೇಖಿಸಿದ ಒಂದೇ ಹೇಳಿಕೆಯ ಮುಖಾಂತರ ಮಾತ್ರ ಹೇಳಿದೆ.

"TRIPS ಜೊತೆಗೆ ಹೊಂದಿಕೆ ಮಾಡಿಕೊಳ್ಳುತ್ತಲೇ, ಪೇಟೆಂಟ್ ಕಾನೂನುಗಳ ಕೆಳಗೆ ನವೀನ ವೈದ್ಯಕೀಯ ಹಾಗೂ ಥೆರೇಪಿಕ್ ಸಂಶೋಧನೆಗಳನ್ನು ಕೈಗೆಟಕುವಷ್ಟು ಹೊಂದಿಸಿಕೊಳ್ಳುತ್ತಲೇ, ರಾಷ್ಟ್ರೀಯ ಆರೋಗ್ಯ ಯೋಜನೆ 2001 ಭವಿಷ್ಯತ್ತಿನಲ್ಲಿ ಪೇಟೆಂಟ್ ಯೋಜನೆಯನ್ನು ಎತ್ತಿ ಹಿಡಿಯುತ್ತದೆ. ಈ ಹಂತದಲ್ಲಿ ದೇಶವನ್ನು ಭದ್ರ ಮಾಡಲು ಎಲ್ಲಾ ಅವಕಾಶಗಳನ್ನೂ ಬಳಸಿಕೊಳ್ಳುತ್ತಿದೆ. ಈ ಯೋಜನೆಯ ಪ್ರಕಾರ ಸರ್ಕಾರವು ಅಂತರ್ ರಾಷ್ಟ್ರೀಯ ಸಂಸ್ಥೆಗಳಾದ ಯು.ಎನ್., ಡಬ್ಲ್ಯು.ಹೆಚ್.ಓ., ಡಬ್ಲ್ಯು.ಟಿ.ಓ. ಗಳ ಮೇಲೆ ಜಗತ್ತಿನ ರಾಷ್ಟ್ರಗಳ ಬದ್ಧತೆಯಂತೆ ಟ್ರಿಪ್ಸ್‌ನ ಆರೋಗ್ಯ ವಿಭಾಗದ ಅಳವಡಿಸುವಿಕೆಯಲ್ಲಿರುವ ತಡೆಗಳನ್ನು ಕಡಿಮೆ ಮಾಡುವುದಕ್ಕೆ ಒತ್ತಡಗಳನ್ನು ತರುತ್ತಿದೆ (ಒತ್ತು ನಮ್ಮದು)''.

ಈ ವರದಿಯಲ್ಲಿ ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿಯಲ್ಲಿ ಕಣ್ಣಿಗೆ ರಾಚುವ ಮಿತಿಗಳ ಬಗ್ಗೆ ನಾವು ಬೆಳಕು ಚಲ್ಲಿದ್ದೇವೆ.

ಈ ಕರಡು ಪ್ರತಿಯು ಅಂಟು ಜಾಡ್ಯಗಳಲ್ಲದ ರೋಗಗಳು, ಮಕ್ಕಳು, ವಯಸ್ಕರು ಹಾಗೂ ವೃದ್ಧರ ಆರೋಗ್ಯದಂತಹ ವಿಚಾರಗಳ ಬಗ್ಗೆ ಸಂಪೂರ್ಣವಾಗಿ ಮೌನವಹಿಸಿದೆ. ಜನಸಂಖ್ಯಾ ನಿಯಂತ್ರಣದ ಬಗ್ಗೆ - ರಾಷ್ಟ್ರೀಯ ಜನಸಂಖ್ಯಾ ಯೋಜನೆ ಸವಿವರವಾಗಿ ಯೋಜನೆ ರೂಪಿಸಬೇಕೆಂದು ಹೇಳುತ್ತಾ, ಅಸಂತುಷ್ಟ ಆರೋಗ್ಯ ಸೇವೆಗಳಿಗೆ - ಏರುತ್ತಿರುವ ಜನಸಂಖ್ಯೆಯೇ ಕಾರಣವೆಂದು ಹೇಳುತ್ತಾರೆ. ನಿಜವೆಂದರೆ ಅನಾರೋಗ್ಯದ ವಾತಾವರಣವೇ ಜನಸಂಖ್ಯಾ ಹೆಚ್ಚಳಕ್ಕೆ ಕಾರಣವಾಗಿದೆ.

ರಾಷ್ಟ್ರೀಯ ಆರೋಗ್ಯ ಯೋಜನೆಯ ಕರಡು ಪ್ರತಿ ಈ ಕೆಳಗಿನ ಆಕರ್ಷಣೀಯ ಒಪ್ಪಿಗೆಯಿಂದ ಕೊನೆಗೊಳ್ಳುತ್ತದೆ.

ಆರೋಗ್ಯ ವಿಭಾಗದ ಸ್ಥಿತಿಯನ್ನು ಕ್ಲಿನಿಕಲ್ ಟೆಸ್ಟ್‌ಗಳ ಆಧಾರದ ಮೇಲೆ ವ್ಯಾಖ್ಯಾನಿಸಿ, ನಾವು ನಿರ್ದಿಷ್ಟ ಯೋಜನೆಯನ್ನು ರೂಪಿಸಬಹುದಿತ್ತು. ಆದರೆ ನಮ್ಮ ಕನಸುಗಳಿಂದ ಪ್ರೇರಿತರಾದ ನಾವು ಸ್ವಲ್ಪ ಮುಂದಕ್ಕೆ ರಾಷ್ಟ್ರೀಯ ಆರೋಗ್ಯ ಯೋಜನೆಯ ರೂಪದಲ್ಲಿ ಹೋಗಿದ್ದೇವೆ. ನಿಜವೆಂದರೆ ಭವಿಷ್ಯದ ದೃಷ್ಟಿಕೋನವನ್ನು ವ್ಯಾಖ್ಯಾನಿಸಿದ್ದೇವೆ. ಈ ದೃಷ್ಟಿಕೋನ ಮಿಲಿಯಾಂತರ ಜನರಿಗೆ ದುಃಸ್ವಪ್ನ ಎಂದು ಬೇರೆ ಹೇಳಬೇಕಾಗಿಲ್ಲ.

- ನೀಲಾಂಜನ ಬಿಸ್ವಾಸ್

*ಮಾನಸದ ಪ್ರಕಟಣೆ ಮಾನಸದ ಓದುಗರ ಆರ್ಥಿಕ ನೆರವನ್ನು ಅವಲಂಬಿಸಿದೆ. ಓದುಗರು ಚಂದಾ ನವೀಕರಣದ ಸೂಚನೆ ಬಂದ ಕೂಡಲೇ ಚಂದಾ ನವೀಕರಿಸಿ ಸಹಕರಿಸಬೇಕೆಂದು ಕೋರುತ್ತೇವೆ.*

*ಸಂ. ಮಂಡಳಿ*

# .....ನಾನೊಂಥ ಕನಸ ಕಂಡೆ ......

ಅಕ್ಕನನ್ನು ನಾಲ್ಕು ಪದಗಳಲ್ಲಿ ಹಿಡಿಯಬಲ್ಲನೇ! ಅಷ್ಟು ಸಮೃದ್ಧವಾಗಿ, ತನ್ಮಯತೆಯಿಂದ ಅನುಭವಿಸಿದ್ದೆ ಆ ಅವಕಾಶವನ್ನು. ಹಿಂತಿರುಗಿ ಬರುವಾಗ, ''ಅವ್ವ ಕೇಳವ್ವ ನಾನೊಂದ ಕನಸ ಕಂಡೆ'' ಎಂದು ಮನಸ್ಸು ಹಗುರವಾಗಿ ಹಾಡುತ್ತಿತ್ತು. ಅದ್ಭುತವಾದ ಕನಸು ಕಂಡ ಅನುಭವ. ಕನಸ ಕಂಡೆ....ನನ್ನೊಳಗೆ ತುಂಬಿಕೊಂಡು ಬಂದೆ....ಒಂದಷ್ಟು ಹತ್ತಿರದವರೊಂದಿಗೆ ಹಂಚಿಕೊಂಡೆ. ಇವನ್ನೆಲ್ಲಾ ನಾಲ್ಕು ಪದಗಳಲ್ಲಿ ಹಿಡಿದಿಡಬೇಕೆಂದರೆ ಸ್ವಲ್ಪ ಕಷ್ಟವೇ!

ಮೈಸೂರಿನ ರಂಗಾಯಣ, ಪ್ರಸನ್ನರವರ ನೇತೃತ್ವದಲ್ಲಿ ಅಕ್ಕ - ರಾಷ್ಟ್ರೀಯ ಮಹಿಳಾ ನಾಟಕೋತ್ಸವವನ್ನು ಸಂಯೋಜಿಸಿತ್ತು. ನವೆಂಬರ್ 18ರಿಂದ 25 - 2001ರ ಅವಧಿಯಲ್ಲಿ ರಂಗಾಯಣದ ಭೂಮಿಗೀತ, ಶ್ರೀರಂಗ, ಕಲಾಮಂದಿರ, ವನರಂಗ ಹಾಗೂ ಹೊರ ಆವರಣದಲ್ಲಿ ನಾಟಕಗಳ ಸುರಿಮಳೆ. ಮಹಿಳೆಯರು ಬರೆದಿದ್ದೋ, ಮಹಿಳೆಯರು ನಿರ್ದೇಶಿಸಿದ್ದೋ, ಇಲ್ಲ ಮಹಿಳೆಯರ ಇಶ್ಯೂವೋ ಒಂದಲ್ಲ ಒಂದು ರೀತಿಯಲ್ಲಿ ಮಹಿಳೆಯರ ಸುತ್ತು ಮುತ್ತ ಹೆಣೆದ ನಾಟಕಗಳು ಹೀಗಲ್ಲದವೂ ನುಸುಳಿಕೊಂಡಿದ್ದವು ಎಂಬ ಆರೋಪವೂ ಕೇಳಿಬಂದಿತ್ತು. ಏನೇ ಇರಲಿ, ನಾಟಕ ನೋಡುವ ಹುಚ್ಚಿನಲ್ಲಿ ಮೊದಲ ಒಂದೆರಡು ದಿನಗಳಲ್ಲೇ ನೋಡಬಹುದಾದ ಎಲ್ಲಾ ನಾಟಕಗಳ ಟಿಕೇಟು ಕೊಂಡುಕೊಂಡಿದ್ದೆ.

18 ರ ಸಾಯಂಕಾಲ - 'ಅಕ್ಕ' ಉತ್ಸವ ತೆರೆದುಕೊಂಡಿತ್ತು. ಉತ್ಸವವನ್ನು ಉದ್ಘಾಟಿಸಿದವರು ಹಿಂದಿಯ ಪ್ರತಿಷ್ಠಿತ ಲೇಖಕಿ ಕೃಷ್ಣಾ ಸೋಬ್ತಿ. ಆ ಹೊತ್ತಿನಲ್ಲಿ ಒಂದಷ್ಟು ಔಪಚಾರಿಕ ಕ್ರಿಯೆಗಳು ನಡೆದವು. ನನ್ನಂತಹ ಸಾಮಾನ್ಯರಿಗೆ ಮಾತ್ರವಲ್ಲ ಒಂದಷ್ಟು ಮಂದಿ ಅಸಾಮಾನ್ಯರಿಗೆ, ಹಿರಿಯರಿಗೆ ಕೂಡಾ ಒಳಗೆ ಹೋಗಿ ಭಾಗವಹಿಸುವುದಕ್ಕೆ ಸ್ಥಳಾವಕಾಶ ಕಿರಿದಾಗಿತ್ತು. ಒಟ್ಟು ಅಕ್ಕ ಉತ್ಸವದ ವಾತಾವರಣಕ್ಕೆ ಹೆಚ್ಚೇನೂ ಧಕ್ಕೆ ಆಗಲಿಲ್ಲ. ಅಂದು ಸಂಜೆ ಶುರುವಾದದ್ದು 25ರ ವರೆಗೂ ಸಮಯ ಕಳೆದದ್ದೇ ಗೊತ್ತಾಗದ ರೀತಿಯಲ್ಲಿ ನಡೆಯಿತು. ಬೆಳಗಾದರೆ ನಾಟಕದ ನಿರ್ದೇಶಕರೊಂದಿಗೆ ಮುಖಾ ಮುಖಿ. ಮಧ್ಯೆ ಮೂರು ಸೆಮಿನಾರುಗಳು. ಮಧ್ಯಾಹ್ನದ ಹೊತ್ತಿನಲ್ಲಿ ಶ್ರೀರಂಗದಲ್ಲಿ ಮಹಿಳೆಯರಿಗೆ ಸಂಬಂಧಿಸಿದಂತಹ ಫಿಲ್ಮ್‌ಗಳು. ಸಂಜೆಯಾಗುತ್ತಿದ್ದಂತೆಯೇ ರಂಗಾಯಣದ ಹೊರ ಆವರಣದಲ್ಲಿ ಬೀದಿ ನಾಟಕಗಳು, ಇದರ ಮಧ್ಯೆ ಸಮಯವೆಲ್ಲಿ! ಹಾಗೆ ಸಮಯ ಸಿಕ್ಕರೂ ಮಾತು, ಗುಸು ಗುಸು, ಅಭಿಪ್ರಾಯ, ಚರ್ಚೆ ಎಲ್ಲವೂ ರಂಗಾಯಣದ ಆಗು-ಹೋಗುಗಳ ಸುತ್ತೇ! ಸ್ನೇಹಿತರಾದ ಸುಮತಿ - ಜೆನ್ನಿ ಮನೆಯಲ್ಲಿ ಉಳಿದುಕೊಂಡ ಕಾರಣ - ಮತ್ತೆ ಹರಟೆ ನಾಟಕಗಳ ಸುತ್ತ ಇದ್ದು, ನನ್ನ ಮಟ್ಟಿಗೇ ವಾರವೆಲ್ಲಾ ನಾಟಕಗಳ ಸುರಿಮಳೆಯಲ್ಲಿ ಮಿಂದು ಬಂದ ಹಾಗೆ ಆಯಿತು.

'ಬಿರ್ಜಿಸ್ ಕದರ್ ಕಾ ಕುನ್ಬ' ನಾನು ನೋಡಿದ ಮೊದಲ ನಾಟಕ. ಮಂಚ್ ಆರ್ಟ್ ಗ್ರೂಪ್ ಬಿಹಾರ್‌ನವರ ನಾಟಕ. ಅರಳುವ ವಯಸ್ಸಿನ ಹೆಣ್ಣುಮಕ್ಕಳ ಬಯಕೆಗಳ ಅದುಮಿಡುವ, ಅಲ್ಲಿಂದ ಆಸ್ಫೋಟಿಸುವ ಪ್ರಕ್ರಿಯೆ. ಅಲ್ಲಿಂದ ತೆರಳಿದ್ದು...'ಏ ಲಡ್ಕಿ' ಗೆ. ಕೃಷ್ಣಾ ಸೋಬ್ತಿಯವರ ಕತೆಯನ್ನು ಆಧರಿಸಿ ನ್ಯಾಶನಲ್ ಸ್ಕೂಲ್ ಆಫ್ ಡ್ರಾಮಾ - ದೆಹಲಿ ಯವರು ಮಾಡಿದ್ದರು. ಮೂರು ಪಾತ್ರಗಳಿದ್ದರೂ, ಅರವತ್ತರ ಹರೆಯದ ಅಮ್ಮ ಆಡಿಕೊಳ್ಳುವ ಸ್ವಗತವೇ ಹೆಚ್ಚಾಗಿದೆ. ತನ್ನ ಉದ್ದದ ಬದುಕನ್ನು, ಅದರ ಅಂತರಾಳವನ್ನು ಬಗೆಯುವ ಪ್ರಯತ್ನ. ಮಹಿಳೆಯ ಬದುಕಿನ ಮಜಲುಗಳನ್ನು ಮೆತ್ತಗೆ ಬಿಚ್ಚಿಡುವ ಕ್ರಿಯೆ....ಹೀಗೆ ಶುರುವಾದದ್ದು ಸರಸಮ್ಮನ ಸಮಾಧಿ, ದ್ರೌಪದಿ ಇಜ್ಜತ್‌ನೊಂದಿಗೆ ಮರುದಿನ ಮುಂದುವರೆದಿತ್ತು. ಡಾ. ಶಿವರಾಮಕಾರಂತರ 'ಸರಸಮ್ಮ' ಭಾಗೀರಥಿ ಬಾಯಿ ಕದಂ ನಿರ್ದೇಶನದಲ್ಲಿ ರಂಗಭೂಮಿಗಿಳಿದಳು. ದಾಂಪತ್ಯದ ಹುಳುಕು, ಸುಳ್ಳು ಪೊಳ್ಳುಗಳನ್ನು ಬಿಚ್ಚಿ ಹರವಿದಳು. ಹೃದಯ ತಟ್ಟುವಂತಹ ಅಕ್ಕನ ವಚನಗಳೊಂದಿಗೆ ರಂಗ ಪ್ರಕ್ರಿಯೆಯನ್ನು ಮುಂದುವರಿಸುವ ಬೆಳ್ಳಿಯಮ್ಮ - ಹಳ್ಳಿಯ ವೇಶ್ಯೆ ಇದರ ಸೂತ್ರಧಾರಿಣಿ. ಅರಿವಿಲ್ಲದಂತೆ ಶಾಕ್ ಕೊಟ್ಟುದು, ಕನ್ಹಯ್ಯಲಾಲ್ ತಂಡ ಅಭಿನಯಿಸಿದ ದ್ರೌಪದಿ-ಇಜ್ಜತ್ ದೇಹದ ಚಲನೆಯನ್ನು ಅತ್ಯಂತ ಶಿಸ್ತು ಹಾಗೂ ಶಕ್ತಿಯುತವಾಗಿ ಬಳಸಿಕೊಂಡು - ಹೆಣ್ಣಿನ ಅಧೀನತೆಯನ್ನು ತೋರಿಸುತ್ತಾ ಬಂದು ಕೊನೆಯಲ್ಲಿ ಮಹಾಶ್ವೇತಾದೇವಿಯ ದೋಪ್ಡಿಯಾಗಿ ಅತ್ಯಾಚಾರಿಗಳನ್ನು

ಎದುರಿಸಿದಲ್ಲಿವರೆಗೆ ಮುಂದುವರಿಯುತ್ತದೆ. ಅತ್ಯಾಚಾರಿಗಳ ಎದುರು ಬೆತ್ತಲೆ ದೇಹವನ್ನೇ ಸವಾಲಾಗಿಸಿ ಹಿಡಿದೇಳುವ ದ್ರೋಪ್ದಿಯ ಚಿತ್ರಣವನ್ನು ಸಾವಿತ್ರೀಬಾಯಿಯವರು ದಿಟ್ಟತನದಿಂದ ಎದುರಿಟ್ಟರು. ಅನಿರೀಕ್ಷಿತವಾಗಿತ್ತು! ಶಾಕ್ ಕೊಟ್ಟಿತ್ತು. ಬೇರೇನೂ ತಲೆಗೆ ಹೊಕ್ಕಿರಲಿಲ್ಲ.

ಹೊರಗೆ ಬಂದ ಮೇಲೆಯೇ ತಿಳಿದಿದ್ದು. ಈ ಚಿತ್ರಣದ ಬಗ್ಗೆ ಒಂದಷ್ಟು ಅನುಮಾನ - ಚರ್ಚೆಗಳು ಹುಟ್ಟಿಕೊಂಡಿದ್ದವು ಎಂದು. ಅಂತಹ ಒಂದು ಕ್ರಿಯೆಗೆ ಕೊಂಡೊಯ್ಯುವಂತಹ ಬೆಳವಣಿಗೆ ನಾಟಕದಲ್ಲಿ ಇರಲಿಲ್ಲ. ಇತರ ಮಾಧ್ಯಮಗಳಲ್ಲಿ ಬಟ್ಟೆ ಬಿಚ್ಚುವುದಕ್ಕಿಂತ ಇದು ಹೇಗೆ ಬೇರೆ, ತನ್ನದೇ ಗಂಡ ಮಕ್ಕಳ ತಂಡವಾದುದಕ್ಕೆ ಸಾವಿತ್ರೀಬಾಯಿಗೆ ಇದು ಸಾಧ್ಯವಾಯಿತೇ ! ಸಾವಿತ್ರಿಯವರಿಗೇ ಇದರ ಬಗ್ಗೆ ಆಯ್ಕೆ ಇತ್ತೇ...ಹೀಗೆ! ಇವೆಲ್ಲದರ ನಡುವೆ ನೋಡುವಾಗ ಸಿಕ್ಕ ಶಾಕ್ ಮನಸ್ಸಿನೊಳಗೆ ಹಾಗೇ ಉಳಿದಿತ್ತು.

'ಕಲ್ಲುರುಟ್ಟಿ' ......ಸೋಪಾನಂ ಕೇರಳ ತಂಡದ ನಾಟಕ. ಹೆಸರಾಂತ ಕೋವಲಮ್ ನಾರಾಯಣ್ ಫಣಿಕ್ಕರ ರವರ ನಿರ್ದೇಶನ. ಜನಪದ ಕತೆಯೊಂದನ್ನು ಆಧರಿಸಿದ್ದು ಆದಿವಾಸಿ ಮತ್ತು ನಾಗರೀಕರ ನಡುವಿನ ಸಂಘರ್ಷದ ಎಳೆಯೊಂದನ್ನು ನಿರೂಪಿಸಿದೆ. ಆದಿವಾಸಿ ಹೆಣ್ಣುಮಗಳು 'ಕಲ್ಲುರುಟ್ಟಿ' ಮುಖ್ಯ ಪಾತ್ರದಲ್ಲಿದ್ದು ತನ್ನ ವಿಶೇಷ ಶಕ್ತಿಗಳಿಂದ ಸಹೋದರರರನ್ನು ಸಂರಕ್ಷಿಸುತ್ತಾಳೆ. ಹಾಡು, ರಾಗ, ಲಯ-ತಾಳ...ದ ಸೊಗಸೇ ಈ ನಾಟಕ ನೋಡಲು ಖುಶಿಕೊಟ್ಟಿತ್ತು. ಮಹಿಳಾ ಪ್ರಧಾನ ಪಾತ್ರ ಬಿಟ್ಟರೆ ಮಹಿಳೆಯರ ಇಶ್ಯೂ ಅಂತ ಹೇಳುವಂತಹುದೇನೂ ಇರಲಿಲ್ಲ. ಅಂದು ಮಹಿಳೆಯರಿಂದ ಯಕ್ಷಗಾನ ಪ್ರದರ್ಶನವೂ ಇತ್ತು. ಶ್ರೀ ಹನುಮಾನ್ ವಿಠೋಬ ಭಜನ ಮಂದಿರ ಮಲ್ಪೆ-ಯವರಿಂದ. ಪ್ರಸಂಗ ಭೀಷ್ಮ ವಿಜಯ. ಪುರುಷರೇ ಮೆರೆದಿರುವ ಸಾಂಪ್ರದಾಯಿಕ ಕಲೆಯೊಂದರಲ್ಲಿ ಮಹಿಳೆಯರು ಕೈಹಾಕಿದ್ದು ವಿಶೇಷ. ಆದರೆ ಇಲ್ಲೂ ಮಹಿಳೆಯ ಅಧೀನತೆಯನ್ನು ಪ್ರಶ್ನಿಸುವ ಪ್ರಯತ್ನ ವಿರಲಿಲ್ಲ, ಎಂದು ಯಾರೋ ಬರೆದದ್ದು ಓದಿದ ನೆನಪು. ದಕ್ಷಿಣ ಕನ್ನಡದಿಂದ ಬಂದವಳಾದುದರಿಂದ ಯಕ್ಷಗಾನವನ್ನು ನಾನು ಆಯ್ಕೆ ಮಾಡಿರಲಿಲ್ಲ.

'ಮಲ್ಲಿನಾಥ ಧ್ಯಾನ' ನಿ.ಹ.ವಿ.ಸ. ಬೆಂಗಳೂರು ರವರ ಅಪರೂಪದ ಪ್ರಯೋಗ. ವೈದೇಹಿಯವರ ಮೂರು ಸಣ್ಣ ಕತೆಗಳನ್ನು ಇಟ್ಟುಕೊಂಡು ಮೂರು ಮಂದಿ ನೆರೇಟ್ ಮಾಡುತ್ತಾ ಹೋಗುತ್ತಾರೆ. ಹೆಣ್ಣಿನ ಲೈಂಗಿಕತೆ ಬಗ್ಗೆ ದಿಟ್ಟವಾಗಿ ಮಾತಾಡುತ್ತದೆ ಈ ನಾಟಕ. ಹಿಂದಿಂದೆಲ್ಲಾ ಕೈಬಿಟ್ಟು ಹೊಸತೊಂದು ರಂಗ ಪ್ರಕ್ರಿಯೆಯನ್ನು ಹುಡುಕುವ ಪ್ರಯತ್ನ ವಿದು ಎಂದು ನಿರ್ದೇಶಕರಾದ ನಟರಾಜ ಹೊನ್ನವಳ್ಳಿಯವರು ಹೇಳಿಕೊಂಡರು. ಹೈದರಾಬಾದಿನ ವಿಮೆನ್ಸ್ ರಿಸೋರ್ಸ್ ಸೆಂಟರ್‌ನವರು - ಮಾಡಿದ ನಾಟಕ 'ಪರದಾ'. ಎಳೆ ವಯಸ್ಸಿನ ಹೆಣ್ಣು ಮಕ್ಕಳು ಹೈದರಾಬಾದಿನಿಂದ ಮೈಸೂರಿಗೆ ಬಂದುದೇ ಒಂದು 'ರಂಗ ಪಯಣ'. ಅವರ ಮಟ್ಟಿಗೆ ಅದು ಎಂಡವರಿಂಗ್ ಅವರಿಗೆ ನಾನೂ ಚಪ್ಪಾಳೆ ಹಾಕಿದೆ. ನಾಟಕಕ್ಕೆ ಅಲ್ಲ. ''ನಾಟಕ ನೋಡಿ, ಸಪೋರ್ಟ್ ಮಾಡಿ'' ಎಂದು ಕೂಗಿ ಕೂಗಿ ಹೇಳಬೇಕಾಗಿ ಬಂತು, ನಿರ್ದೇಶಕಿ ಮಮತಾ ಸಾಗರ್‌ರವರಿಗೆ.

ಚೆನ್ನೈನ ವಾಯ್ಸಿಂಗ್ ಸಯಲೆನ್ಸ್- ಗುಂಪಿನ ಮೇಡ್ಶ್ಯೆ ಪೇಸುದು ಒಂದು ಬೇರೆಯೇ ಅನುಭವ. ಯಾವದೇ ಸಾಫಿಸ್ಟಿಕೇಷನ್ ಇಲ್ಲದೆ, ಬಾಯಿಬಿಟ್ಟು - ದನಿ ಎತ್ತರಿಸಿ..ತಾವು ತಾವೇ ಹಾಡುತ್ತಾ ನಟಿಸುವ ಪ್ರತಿಯೊಬ್ಬ ನಟಿಯರು, ಭಾಷೆ ಅರ್ಥವಾಗದೆ ಕಷ್ಟವಾಯಿತು. ಕೃಷಿ ಕಾರ್ಮಿಕ ಮಹಿಳೆಯರ ನಾಟಕ ತಂಡವಿದು. ಅದೇ ರಗಡ್ ಅಭಿನಯ ರೀತಿ-ನೀತಿ ಬಹುಶಃ ಅದರ ಅಭಿರುಚಿಯೇ ಬೇರೆ. ಕೇರಳದ ಅರಂಗೋಟ್ಟು ನಾಟಕ ಸಂಘದ ಒರೋರು ಕಾಲತ್ತಿಲ್ ಆಗಲೀ, ಥಿಯೇಟರ್ ಅಕಾಡೆಮಿ ಪುಣೆಯ ಬೇಗಂ ಬರ್ವೆಯಾಗಲೀ ಅರ್ಥಮಾಡಿಕೊಳ್ಳುವುದಕ್ಕೆ ಕಷ್ಟವಾಗಿ ನಾಟಕ ಸಂಪೂರ್ಣ ನೋಡುವುದಕ್ಕೂ ಆಗಲಿಲ್ಲ.

ಮತ್ತೊಂದು ಮನ ಅರಳಿಸಿದ ನಾಟಕ, 'ಕಲ್ಲರಳಿ ಹೂವಾಗಿ' ಭಾರತೀಯ ರಂಗಶಿಕ್ಷಣ ಕೇಂದ್ರ ರಂಗಾಯಣದವರಿಗೆ ಸುಮತಿಯವರ ನಿರ್ದೇಶನ. ಮನಸ್ಸಿಗೆ ತಂಪೆರೆಯುವಂತೆ ಅಕ್ಕನ ವಚನಗಳು ಅದರ ರಾಗ, ಅಕ್ಕಂದೇ ಬದುಕಿನ ನಿರೂಪಣೆ - ಪ್ರಸಕ್ತ ಸಮಾಜದಲ್ಲಿ ಅಕ್ಕನ ಪ್ರಸ್ತುತತೆ...ಹೀಗೆ ನಾಟಕ ಬಿಚ್ಚಿಕೊಳ್ಳುತ್ತದೆ. 'ಅವ್ವ ಕೇಳವ್ವ ನಾನೊಂದ ಕನಸ ಕಂಡೆ' ಇಲ್ಲಿಂದಲೇ ಹೆಕ್ಕಿಕೊಂಡೆ. ಬೆಂಗಳೂರು ಜಾರುಬಂಡೆಯವರ 'ರೆಕ್ಕೆ ಕಟ್ಟುವಿರಾ'?

ಅಕ್ಕನಿಗೊಂದು ರೆಕ್ಕೆ ಕಟ್ಟುವಲ್ಲಿ ಸಮರ್ಥವಾಯಿತು. (ಮೊದಲೇ ನೋಡಿದ್ದರಿಂದ ಅಲ್ಲಿ ನೋಡಲಿಲ್ಲ).

ಏಕವ್ಯಕ್ತಿ ಪ್ರದರ್ಶನಗಳು :

ಅಕ್ಕನ ಒಂದು ವಿಶೇಷ ಆಕರ್ಷಣೆ ಇದ್ದುದು, ಈ ಏಕವ್ಯಕ್ತಿ ಪ್ರದರ್ಶನಗಳಲ್ಲಿ. ಬೆಂಗಳೂರಿನ ಲಕ್ಷ್ಮಿ ಚಂದ್ರ ಶೇಖರ್ ತಂಡದ 'ಸಿಂಗಾರವ್ವ ಮತ್ತು ಅರಮನೆ' ಡಾ॥ ಚಂದ್ರಶೇಖರ ಕಂಬಾರರ ಕಾದಂಬರಿ ಆಧಾರಿತ ಸೌಮ್ಯವರ್ಮ ನಿರ್ದೇಶನ, ಲಕ್ಷ್ಮೀಚಂದ್ರಶೇಖರ ರವರ ಅಭಿನಯ ಅರಮನೆಯಲ್ಲಿ ಉಳಿದ ಏಕೈಕ ವ್ಯಕ್ತಿ ಸಿಂಗಾರವ್ವನ ದಾಸಿ, ಸಖಿಯಾದ ಶೀನಿಂಗವ್ವನ ನರೇಶನ್, ಅದರೊಂದಿಗೆ ಉಳಿದ ಪಾತ್ರಧಾರಿಗಳು ಚಿಕ್ಕಚಿಕ್ಕ ವೇಷಭೂಷಣಗಳಲ್ಲಿ ರೂಪತಾಳುತ್ತಾ ಬರುತ್ತಾರೆ. ಗಟ್ಟಿಯಾದ ಮಹಿಳಾ ನಿಲುವು ಹೊಂದಿದ ಮತ್ತೊಂದು ನಾಟಕ.

ಮನೆಕೆಲಸದ ಪರಿವೆಯಿಲ್ಲದೆ, ನಮ್ಮೊಂದಿಗೆ ಮಾತಾಡಿದ್ದು ನಾದಿರಾಬಬ್ಬರ್‌ನ ಏಕ್‌ಜೂಟ್ ತಂಡದ, ಮನೆಕೆಲಸದಾಕೆ ಸಕ್ಕೂಬಾಯಿ. 90 ನಿಮಿಷಗಳ ಕಾಲ ನಮ್ಮೊಂದಿಗೆ ಏಕಮುಖವಾಗಿ ಹರಟಲು ಒಂದಿಂಚು ಕದಲದಂತೆ ಹಿಡಿದಿಡಲು ಆಕೆಗೆ ಸಾಧ್ಯವಾಗಿತ್ತು. ಮುಂಬಯಿಗೆ ವಲಸೆ ಬಂದ ಶಕುಂತಲಾ ಬಾಯಿ ಸಕ್ಕೂಬಾಯಿ ಆಗುತ್ತಾಳೆ. ಬಡ - ಸಿರಿವಂತ ಮಹಿಳೆಯರ ಬದುಕಿನ ಪದರಗಳ ಪರಿಚಯಿಸುತ್ತಾಳೆ. ಸೂಕ್ಷ್ಮವಾದ ಹಾಸ್ಯ ಭರಿತ ವ್ಯಂಗ್ಯದೊಂದಿಗೆ ಸತ್ಯದ ಮಿಂಚುನೋಟ ನೀಡುತ್ತಾಳೆ. ಆಕೆಯ ಮಾತು (ಯಾಕೋ ನಾಟಕ ಎನ್ನುವುದಕ್ಕೆ ಮನಸ್ಸು ಬರುವುದಿಲ್ಲ) ಮುಗಿಯುವುದು, ಸಕ್ಕೂಬಾಯಿಯ ಮಗಳು ತನ್ನ ತಾಯಿಯ ಮೇಲೆ ಬರೆದ ಕವಿತೆಯೊಂದಿಗೆ. ''ಒಂದು ಹೋರಾಟ ನಡೆಸಿ ಝಾನ್ಸಿರಾಣಿ ಪೌರುಷವನ್ನು (ಮರ್ದಾನಿ) ಮೆರೆದಳು''. ಆದರೆ ಪ್ರತಿದಿನ ಹತ್ತು ಹಲವು ಹೋರಾಟ ನಡೆಸುವ ನಿನ್ನನ್ನು ಏನೆನ್ನಬೇಕು! ಸಕ್ಕೂಬಾಯಿಯನ್ನು ರಂಗಕ್ಕಿಳಿಸಿದ ಸರಿತಾ ಜೋಷಿ 62 ವರುಷದಾಕೆ. ಎರಡನೇ ಪ್ರದರ್ಶನದಲ್ಲೂ, ಎಳ್ಳಷ್ಟೂ ಆಯಾಸದ ಸುಳಿವಿಲ್ಲದೆ ನಟಿಸಿದರು. ಉದ್ದಕ್ಕೂ ಬಡ ಮಹಿಳೆಯ ಮೇಲಾಗುವ ಒತ್ತಡ, ದೌರ್ಜನ್ಯಗಳ ಕತೆ ಹೇಳಿದರೂ ಕೂಡಾ frustrating ದನಿಯಾಗಿ ಉಳಿಯದಿರುವುದು ಈ ನಾಟಕದ ಸೊಗಸು!.

ನಾನು ನೋಡದೇ ಹೋದದ್ದು, ಕಳೆದುಕೊಂಡೆ ಅಂತ ಎಲ್ಲರೂ ಸೂಚಿಸಿದ್ದು - ಲೂನಾ. ಅಲರಿಪು ತಂಡ, ದೆಹಲಿಯವರ ಕೊಡುಗೆ. ತ್ರಿಪುರಾರಿ ಶರ್ಮ ನಿರ್ದೇಶನ ಸಪ್ನಾರವರ ಆಳ-ಶ್ರೀಮಂತ ಸ್ವರ, ಅದ್ಭುತವಾದ ಅಭಿನಯದೊಂದಿಗೆ ವೀಕ್ಷಕರನ್ನು ದಂಗುಬಡಿಸಿತು ಎಂದು ಹೇಳುತ್ತಾರೆ.

ಬೀದಿ ನಾಟಕಗಳು :

ರಂಗಾಯಣದ ಹೊರವಲಯದಲ್ಲಿ ನಡೆಯುತ್ತಿದ್ದ ಬೀದಿ ನಾಟಕಗಳು ಅದರ ಅನುಭವವೇ ಬೇರೆ. ಸಂಜೆಯ ಹೊತ್ತು ಇಳಿ ಬಿಸಿಲು, ಸುತ್ತಲೂ ಕಿಕ್ಕಿರಿದ ಜನರು. ಮಧ್ಯೆ ನಾಟಕ. ಭಾವೈಕ್ಯತಾ ವೇದಿಕೆ. ಹೊಸಪೇಟೆಯವರ 'ಅಕ್ಕ' ಮೊದಲಿಗೆ ನಡೆದಿತ್ತು. ಮಹಿಳೆಯರ ಮೇಲಿನ ಇಂದಿನ ದೌರ್ಜನ್ಯ, ಅದನ್ನು ನೋಡುತ್ತಾ ಪ್ರತಿಭಟನೆಯ ದನಿ ಎಬ್ಬಿಸಲು ಅಕ್ಕನನ್ನು ಹನ್ನೆರಡನೇ ಶತಮಾನದಿಂದ ಕರೆಸಲಾಗಿತ್ತು. ಹೈದಾರಾಬಾದಿನ ಪ್ರಜಾ ನಾಟ್ಯ ಮಂಡಳಿಯವರ 'ಬಂಜಾರಿನ್' ಲಂಬಾಣಿ ಜನಾಂಗದ ಪರಿಸ್ಥಿತಿಯನ್ನು ಚಿತ್ರಿಸಿತ್ತು. ಹಾಡು, ಮ್ಯೂಸಿಕ್‌ನೊಂದಿಗೆ ತುಂಬಿಕೊಂಡಿತ್ತು. ಮಹಿಳಾ ಸಮಖ್ಯ, ಕೊಪ್ಪಳದ ಗ್ರಾಮೀಣ ಮಹಿಳೆಯರು 'ಅವ್ವ' ನಾಟಕದಲ್ಲಿ ಮಹಿಳೆಯರ ಇತಿಹಾಸವನ್ನು ಬಗೆದರು. ಸಮುದಾಯ - ಬೆಂಗಳೂರಿನವರ 'ನ್ಯಾಯಕ್ಕಾಗಿ ಕಾದ ಬಾಂದಲಿ' ಪವರ್‌ಫುಲ್ ಆಗಿತ್ತು ಎಂದು ಹೇಳುವುದನ್ನು ಕೇಳಿದೆ. ಜನ ನಾಟ್ಯಮಂಚ್, ದೆಹಲಿಯವರ 'ಓ ಬೋಲ್ ಉಠಿ' ಮತ್ತು 'ಔರತ್' ನಾಟಕಗಳು ನನ್ನ ನೆನಪಿನ ಭಾಗವಾಗಿ ಉಳಿದವು. ಅತ್ಯಂತ ಸರಳ, ನೇರ, ಪವರ್‌ಫುಲ್ - ಹೇಗೆ ಸಾಧ್ಯ ಅನ್ನೋದನ್ನು ತೋರಿಸಿಕೊಟ್ಟಿತು. ಅಟ್ಟಹಾಸಗೈಯದೇ, ಕಿರುಚದೇ, ಕೂಗದೇ, ಪವರ್ ಹೇಗೆ ಜನರೇಟ್ ಆಗಬಹುದು ಎನ್ನುವುದನ್ನು ಕಂಡುಕೊಂಡೆ. 'ಓಬೋಲ್ ಉಠಿ' - ಅವಳು - 'ಅವಳು ಹೇಳ ತೊಡಗಿದಳು' ......ನೋಡನೋಡುತ್ತಾ ಹೇಳುವ, ಪ್ರತಿಪಾದಿಸುವ ಅವಳತನ ಕಂಡುಕೊಂಡೆ. ಅದರಲ್ಲಿ ಸಿಕ್ಕಿದ 'ಪವರ್' ಒಂದು ನನ್ನೊಳಗೆ ಹಾಗೇ ಒಂದು ಪ್ರೇರಣೆಯಾಗಿ ಉಳಿದಿದೆ.

ಸೆಮಿನಾರುಗಳು / ಮುಖಾಮುಖಿಗಳು :

ಅಕ್ಕ ಉತ್ಸವದ - ಹಿಂದಿನ ಅಕ್ಕ, ಮಹಿಳೆ,

ನಾಯಕತ್ವ, ಸಶಕ್ತತೆ ಇವೇ ಪರಿಕಲ್ಪನೆಗಳನ್ನು ಹಿಗ್ಗಲು ಜಗ್ಗಲು ಅರಿಯಲು ಅವಕಾಶ ಮಾಡಿಕೊಟ್ಟುದು ಈ ಸೆಮಿನಾರುಗಳು. ಇಂಗ್ಲೀಷ್‌ನಲ್ಲಿ ಎರಡು ಸೆಮಿನಾರುಗಳು, ಕನ್ನಡದಲ್ಲಿ ಒಂದು ಸೆಮಿನಾರ್. ರಂಗ ಭೂಮಿಯ ಅನುಭವಿಗಳು, ಚಿಂತಕರು... ಒಂದಷ್ಟು ಪ್ರಶ್ನೆಗಳನ್ನು ಎತ್ತಿದರು. ನಾಟಕಗಳ ಬಗೆ - ನಿರ್ದೇಶಕರೊಂದಿಗೆ ಸಂವಾದ ನಡೆಯುತ್ತಿದ್ದುದು ಮುಖಾಮುಖಿಗಳಲ್ಲಿ.

ಮಹಿಳಾ ನಾಟಕೋತ್ಸವ...ಎಂಬ ವಿಶೇಷಣೆಯನ್ನು ಸಮರ್ಥಿಸುವಂತಹುದು ಇಲ್ಲಿ ಏನಿದೆ. ಒಂದು ರಚನೆಯೊಳಗೆ, ಪುರುಷರು ಬಳಸುತ್ತಿದ್ದ ಕೋಣೆಯೊಳಗೆ, ಮಹಿಳೆಯರನ್ನು ಬರಹೇಳಿದ ಮಾತ್ರಕ್ಕೆ ಅದು ಮಹಿಳಾ ರಂಗಭೂಮಿಯಾಗುವುದೇ ಅಥವಾ ಮಹಿಳಾ ದೃಷ್ಟಿಕೋನಕ್ಕೆ ಅನುಗುಣವಾಗಿ ಅಲ್ಲೇನಾದರೂ ರಾಚನಿಕ ವ್ಯತ್ಯಾಸವಾಗಬೇಕೆ?.

ಫಿಮೇಲ್ ಲೀಡ್ - ಹಾಗೆಂದರೇನು? ರಂಗಭೂಮಿಯಲ್ಲಿ ಮೆರೆದ ಹಿರೋಯಿನ್‌ಗಳನ್ನೇ ಇದು ಮುಂದಿಡುತ್ತಿದೆಯೇ? ರಂಗ ಪ್ರಕ್ರಿಯೆಯ ಹಿಂದೆ ಕೆಲಸ ಮಾಡಿದ ಮಹಿಳೆಯರ ಸುದ್ದಿ ಇದು ಎತ್ತುತ್ತಿದೆಯೇ?

'ಅಕ್ಕ' ಎಂದೇ ಯಾಕೆ ಒಂದು ಸಂಬಂಧ ವಾಚಕದ ಮೂಲಕವೇ ಮಹಿಳೆಯರನ್ನು ಗುರುತಿಸಬೇಕು. ಬೇಡ ನಮಗೆ ಇದೆಲ್ಲ. ನಮ್ಮನ್ನು ನಾವಾಗಿರಲು ಬಿಡಿ ಸಾಕು. ಯಾವ ಪಾತ್ರದೊಂದಿಗೆ ತಳುಕು ಹಾಕಿ ಗುರುತಿಸುವುದು ಯಾಕೆ?

ರಂಗಭೂಮಿಗೆ - ಕಾಲಿಡುವ 'ಅಂದಿನ' ಸ್ಥಿತಿ ಹೇಗಿತ್ತು, ಈಗ ಹೇಗಿದೆ - ಕೆಲವು ಪ್ರದೇಶಗಳಲ್ಲಿ ಬೆಳವಣಿಗೆ ಇದೆ.

ಅಕ್ಕ - ಉತ್ಸವದಲ್ಲಿ ಹೆಚ್ಚಾಗಿ ಮಹಿಳೆಯನ್ನು ಒಂದು 'ಬಲಿಪಶು' (Victim) ಎಂಬ ನೆಲೆಯಿಂದಲೇ ನೋಡಲಾಗಿದೆ. ಆಕೆಯನ್ನು ಇವೆಲ್ಲದರ ಮಧ್ಯದಲ್ಲಿ ಬದುಕಿ ಉಳಿದವಳು (Survivors) ಆಗಿ ನೋಡಿದ್ದು ಕಡಿಮೆ. ಕೆಲವೇ ಕೆಲವು ನಾಟಕಗಳು ಈ ನಿಟ್ಟಿನಲ್ಲಿದ್ದವು.

ಮಹಿಳೆಯರು enjoy ಮಾಡುವ, ಮಜಾ ಮಾಡುವ ಸನ್ನಿವೇಶಗಳು ಕಡಿಮೆ ಇದ್ದವು.

ರಂಗಭೂಮಿ ಬಹಳ ಡೆಮೋಕ್ರೆಟಿಕ್ ಆಗಿರುವಂತಹ ಜಾಗ. ಇದರೊಳಗೆ ಮಹಿಳೆಯರಿಗೆ ಇನ್ನೊಂದು ರಚನೆ (Construct)ಯ ಅಗತ್ಯವೇನಿದೆ!

ಮಹಿಳೆಯರಿಗೆ, ಅಭಿವ್ಯಕ್ತಿ ಕೂಡಾ ಆಯುಧವಾಗಿದೆ. ಅಭಿವ್ಯಕ್ತಿಯೇ ಒಂದು ಕ್ರಿಯೆಯಾಗಿದೆ.

ರಂಗಭೂಮಿ ಪ್ರಕ್ರಿಯೆಯಿಂದಲೇ ಬದಲಾವಣೆ ಸಾಧ್ಯವಿಲ್ಲ. ಅದೊಂದು ಪ್ರೇರಣೆಯನ್ನಷ್ಟೇ ಕೊಡಬಲ್ಲದು. ಕ್ರಿಯೆಗೆ ತೊಡಗಿಸಿಕೊಳ್ಳುವುದಕ್ಕೆ ಚಾಲನೆ ನೀಡಬಹುದು. ಒಂದು ಕಲೆಗೆ, ಸಿನೇಮಾಕ್ಕೆ ಬದಲಾವಣೆ ತರಲು ಸಾಧ್ಯವಾಗದು. ಆದರೆ ಒಂದು ಸಂವೇದನಾಶೀಲವಾದ, ಬದಲಾವಣೆಗೆ ಪೂರಕವಾದ ವಾತಾವರಣವನ್ನು ಹುಟ್ಟುಹಾಕುವ ತಾಕತ್ತಿದೆ.

'ಫೆಮಿನೈನ್ ಗೇಜ್....ಗುರುತಿಸಿಕೊಳ್ಳುವ ಅಗತ್ಯವಿದೆ' ಎಂದು ಒಬ್ಬರು ಹೇಳಿದರೆ, ಯಾವ ಹಿನ್ನಲೆಯ ಮಹಿಳೆಯರ "ಗೇಜ್" ಎಂಬ ಪ್ರಶ್ನೆ ಕೇಳಿ ಬಂತು. ಒಂದೊಂದು ಹಿನ್ನಲೆಯಲ್ಲಿ ಫೆಮಿನೈನ್ ಗೇಜ್ ಬೇರೆ ಬೇರೆಯೇ ಆಗಿರಬಹುದಲ್ಲಾ!

"ಮಹಿಳಾ" ಡೈರಕ್ಟರ್, "ಮಹಿಳಾ" ಬರಹಗಾರರು...ಎಂದು ಹೇಳಲು ಸಂಕೋಚಪಡಬೇಕಿಲ್ಲ. ಈ ಗುರುತನ್ನು ಸ್ಥಾಪಿಸಬೇಕಾಗಿದೆ. ಇದರ ಅರ್ಥವನ್ನೇ ಬದಲಾಯಿಸಬೇಕಾಗಿದೆ. ಹೀಗೆ ಹೇಳುವುದರಲ್ಲಿ ಒಂದು ಬದ್ಧತೆ ಬೆಳೆಸಿಕೊಳ್ಳಬೇಕಾಗಿದೆ.

ಶೀಲ ನೀತಿಗಳನ್ನು ಮಹಿಳೆಯರ ಮೇಲೆ ವಿಪರೀತವಾಗಿ ಹೇರಲಾಗುತ್ತದೆ. ಇದರ ಅಗತ್ಯವಿಲ್ಲ. ನಮ್ಮ ಹೆಣ್ಣುಮಕ್ಕಳನ್ನು ಈ ಶೀಲದ ಭಯವಿಲ್ಲದೆ ಬೆಳೆಸುವುದಕ್ಕೆ ಸಾಧ್ಯವಾದರೆ - ಎಷ್ಟೋ ಬದಲಾವಣೆ ಸಾಧ್ಯ. 'ಕನ್ಯತೆ' (Virginity)ಗೆ ಕೊಡುವ ಮೌಲ್ಯವೇ ಸಡಿಲವಾದರೆ ಅದನ್ನು ಕಳ್ಕೊಳ್ಳುವುದು ದೊಡ್ಡ ವಿಷಯವಲ್ಲವೆಂದು ಮನವರಿಕೆಯಾಗುವುದು ಸಾಧ್ಯವಾದರೆ, ಸಮಾಜ ಬಹಳ ಮುಕ್ತವಾಗಿ ಬಿಡುವುದು. ಅಷ್ಟು ಕೆಟ್ಟದೆಯೇ ನಮ್ಮಲ್ಲಿ!

ರಂಗಭೂಮಿ - ವ್ಯಕ್ತಿಗತವಾಗಿ ಮಹಿಳೆಯರಿಗೆ ಏನು ಕೊಟ್ಟಿದೆ? ಧೈರ್ಯ ಕೊಟ್ಟಿದೆ, ಸಾಹಸ ಕೊಟ್ಟಿದೆ, ಅನ್ನ ಕೊಟ್ಟಿದೆ, ಕೀಳರಿಮೆ ತೆಗೆದಿದೆ, "ವೇದಿಕೆ" ಕೊಟ್ಟಿದೆ. ದೇಹಕ್ಕೆ - ಚಲನೆಗೆ ಒಂದು ಅವಕಾಶ ತೆರೆದಿದೆ. ಮೈಮುದುರಿ ಇರುವ

ಸಂಪ್ರದಾಯವನ್ನು ರಂಗಭೂಮಿ ಕಾರ್ಯಾಗಾರಗಳು ಕಿತ್ತುಹಾಕಿವೆ. ಮೈಚಳಿ ಬಿಡಿಸಿದೆ. ಫಿಸಿಕಲ್ ಫ್ರೀಡಂ ನೀಡಿದೆ.

ನಮ್ಮನ್ನು ನಾವು ಸ್ವತಂತ್ರವಾಗಿ ಹುಡುಕಿಕೊಳ್ಳಬೇಕಾಗಿದೆ. ಯಾರಿಗಾಗಿಯೋ ಅಭಿವ್ಯಕ್ತಿಸುವ ಪ್ರಯತ್ನ ಮಾಡದೆ, ನನಗೆ ನಾನೇ ಸಹಜವಾಗಿ ಅಭಿವ್ಯಕ್ತಿಸಬೇಕೆನಿಸಿದಾಗ, ನಾನು ಅಭಿವ್ಯಕ್ತಿಸಬೇಕು. ನನ್ನ ಅನುಭವ ಬೇರೆಯವರಿಗೆ ರಂಜನೀಯ ವಸ್ತುವಾಗಬೇಕಾಗಿಲ್ಲ.

ಇವೆಲ್ಲಾ ಸೆಮಿನಾರ್....ಮುಖಾಮುಖಿಗಳಲ್ಲಿ ಕೇಳಿಬಂದ ಮಾತುಗಳು. ಒಟ್ಟು ಅನುಭವದ ಗಾಢತೆ ನನ್ನೊಳಗೆ ಅಚ್ಚೊತ್ತಿದೆಯೇ ಹೊರತು, ಬಿಡಿಬಿಡಿಯಾದ ಈ ತುಣುಕುಗಳಲ್ಲ. ಅದಕ್ಕಾಗಿ ಬರೆಯುವಾಗಲೂ, ಹಸಿಯಾಗಿ ನೆನಪಿರುವ ಒಂದಷ್ಟನ್ನು ಹಾಕಿದ್ದೇನೆ. ಇನ್ನೂ ಏನೇನೋ ಮಾತುಕತೆಗಳು, ಇಂಟಲೆಕ್ಚುವಲ್ ಚರ್ಚೆಗಳು ಕೂಡಾ ಅಲ್ಲಿ ನಡೆಯುತ್ತಿದ್ದವು. ಒಂದಷ್ಟು ಅರ್ಥವಾದವು. ಮತ್ತೊಂದಷ್ಟು ತಲೆಯೊಳಗೆ ಹೋಗಲಿಲ್ಲ. ಟಿಪ್ಪಣಿ ಮಾಡಿಕೊಂಡಿಲ್ಲ. ಕಿವಿಗೆ ಬಿದ್ದಷ್ಟು, ಮನದಲ್ಲಿ ತುಂಬಿದಷ್ಟು!

ಮತ್ತೂ ಒಂದಷ್ಟು....

ಇಷ್ಟು 'ಅಕ್ಕನ' ಬಗ್ಗೆ ಎಂದು ಹೇಳಿ ಮುಗಿಸುವುದಕ್ಕೆ ಆಗುತ್ತಿಲ್ಲ. ಒಂದೆಡೆ, 'ಮಹಿಳೆ' ಕೇಂದ್ರವಾಗಿರುವ ಸಿನಿಮಾ ಪ್ರದರ್ಶನಗಳಿದ್ದವು. ಒಂದಷ್ಟು ಮಹಿಳೆಯರು ತಯಾರಿಸಿದ ಮಾರಾಟದ ಮಳಿಗೆಗಳಿದ್ದವು. ರಾಗಿ ದೋಸೆ, ಕಾಳು ದೋಸೆ ಒದಗಿಸುವ ದೇಶೀ ಆಹಾರದ ಕ್ಯಾಂಟೀನ್ ಇತ್ತು. ಕಡಿಮೆ ಸ್ಥಳದಲ್ಲಿ...ಸಾಕಷ್ಟು ಮಂದಿಯನ್ನು ಆಕರ್ಷಿಸಿ, ಉಪಚರಿಸುವುದು ನಡೆದಿತ್ತು.

ಉತ್ಸವದ ಉದ್ದಕ್ಕೂ ನನಗೆ ಜತೆಗಾತಿ ಸಿಕ್ಕಿದ್ದು ಮತ್ತೊಂದು ವಿಶೇಷ ಅನುಭವ. ಜತೆ ಇಲ್ಲದೆ 'ಇರುವಿಕೆ' ಎಂದರೆ ಸ್ವಲ್ಪ ಕಷ್ಟ. ಅಂಚೆ ಕೆಲಸ ಮಾಡುವ ಜಯಲಕ್ಷ್ಮಿಗೆ ನಾನು, ನನಗೆ ಆಕೆ ಬೇಕಾಗಿತ್ತು. ಒಂದೋ ಎರಡೋ ಪ್ರದರ್ಶನ ಮುಗಿಸಿ ರಾತ್ರಿ ಹನ್ನೆರಡರ ಹೊತ್ತಿಗೆ ಗಂಗೋತ್ರಿಯಲ್ಲಿ ಟೂ ವೀಲರ್‌ನಲ್ಲಿ ಜಯಲಕ್ಷ್ಮಿ ಜೊತೆಗೆ ಹೋಗುವಾಗ ಭಯಂಕರ ಎಂಪವರ್‌ಮೆಂಟ್‌ನ ಭಾವನೆ. ನಾಟಕಗಳಿಗೆಲ್ಲಾ ಟಿಕೇಟುಗಳು ಭದ್ರವಾಗಿ ಜೋಡಿಸಿಕೊಂಡಿದ್ದು, ಟಿಕೇಟು ಸಿಗದೆ ಹೋಗುವವರನ್ನು ನೋಡುವಾಗ ನಮ್ಮನ್ನೇ 'ಅದೃಷ್ಟವಂತರು' ಎಂದು ಹೇಳಿಕೊಳ್ಳುವ ಖುಷಿ.

ಶಬಾನಾ ಅಜ್ಮಿಯ, ಬರುವಿಕೆ, ಇರುವಿಕೆ, activism ನೊಂದಿಗೆ ಬೆರೆತ ಗ್ಲಾಮರ್, ಒಂದು ಥರಾ ಆಕರ್ಷಕ. ಅತ್ಯಂತ ಸರಳವಾಗಿ, ದಿಟ್ಟವಾಗಿ - ಪವರ್‌ಫುಲ್ ಎನಿಸುವ ಮೊಲಾಯಶ್ರೀ ಹಶ್ಮಿಯದೊಂದು ಇಮೇಜ್. ರಂಗಭೂಮಿಯ ಹಿರಿಯರಾದ ರತಿಬಾರ್ತಲೋಮೆ, ಲಕ್ಷ್ಮೀ ಕೃಷ್ಣಮೂರ್ತಿಯಂತಹವರ ಸಹಜ ಇರುವಿಕೆ. ಹೊಸ ತಲೆಮಾರಿನ ಬಾಗಿ, ಸುಮತಿಯಂತಹವರ ಬದ್ಧತೆ, ಕಾಳಜಿ, ಲಕ್ಷ್ಮೀಚಂದ್ರಶೇಖರ್‌ರಂತಹವರ ನೇರ, ಪ್ರಾಮಾಣಿಕ ಕ್ರಿಯೆ ಪ್ರಕ್ರಿಯೆಗಳು....ಹೀಗೇ ಮಿಂಚಿ ಮಾಯವಾಗುತ್ತಿವೆ ಹತ್ತು ಹಲವು ಮುಖಗಳು. ಅಲ್ಲಿ ಬರೇ ಹೆಂಗಸರೇ ಇದ್ದುದಲ್ಲ. ಹೆಂಗಸರು ಯಾಕಿಷ್ಟು ಕಡಿಮೆ ಎನ್ನುವ ಒಂದು ಮಾತು ಕೇಳಿ ಬರುವಷ್ಟು ಗಂಡಸರೂ ಇದ್ದರು. ಒಟ್ಟು ಆಶಯಕ್ಕೆ, ಸಹಚರರಂತೆ ನಡೆದಿದ್ದರು.

ಏನೇ ಇರಲಿ ಇಂತಹ ಉತ್ಸವವನ್ನು ವಿಶುಯಲೈಸ್ ಮಾಡಿದ ರಂಗಾಯಣದ ಮಂದಿಗೆ ಒಂದು ಮೊದಲ ಸಲಾಮು. ನೆಮ್ಮದಿಯಿಂದ ಮನೆ, ಮಕ್ಕಳು, ಕೆಲಸ ಮರೆತು ಅಕ್ಕನೊಳಗೆ ಲೀನವಾಗಿ ಕನಸು ತುಂಬಿಕೊಳ್ಳುವ ಅವಕಾಶ ಮಾಡಿಕೊಟ್ಟ ನನ್ನವರಿಗೆ, ನನ್ನ ಮಕ್ಕಳಿಗೆ ಹೃತ್ಪೂರ್ವಕ ಪ್ರೀತಿಯ ''ಸಲಾಮು''.

ಅಯ್ಯೋ ಮಕ್ಕಳು ಹೇಗೆ. ಅಯ್ಯೋ ನಾನಿಲ್ಲವಾದರೆ ಮನೆಗತಿ ಏನು. - ಎಂಬ ಯೋಚನೆಯಿಲ್ಲದೆ ಇಂತಹ ''ಅವಕಾಶ'' ಅನುಭವಿಸುವುದು ಒಂದು ರೀತಿಯಲ್ಲಿ ಎಂಪವರಿಂಗ್ ಆಗಿರುತ್ತದೆ. ತಮ್ಮನ್ನು ತಾವು ಅರ್ಥ ಮಾಡಿಕೊಳ್ಳಲು, ರಿಲ್ಯಾಕ್ಸ್ ಆಗಿ ಯೋಚಿಸಲು ಇಂತಹ ಅವಕಾಶ (Space) ಬೇಕಾಗುತ್ತದೆ. ಇಂತಹ ಅವಕಾಶ ನಾವು ಪರಸ್ಪರ ಒದಗಿಸುವ ಕೆಲಸ ಕೂಡಾ ಅತ್ಯಂತ ಮಹತ್ವದ್ದು...

ಅಕ್ಕ ನನಗೆ ಕೊಟ್ಟದ್ದು ಇಂತಹ ಒಂದು Spaceನ್ನು. ಅದಕ್ಕಾಗಿ ನಾನೊಂದ ಕನಸು ಕಾಣಲು, ತುಂಬಿಕೊಂಡು ಬರಲು ಸಾಧ್ಯವಾಯಿತು. ''ಏನು ಕನಸ ಕಂಡೆ?'' ಎಂದು ಮಾತ್ರ ಕೇಳಬೇಡಿ. ನನಗೇ ಗೊತ್ತಿಲ್ಲ. ಹೇಳಲಾರದ....ಹಿಡಿದಿಡಲಾರದ ನನ್ನದೇ ಒಂದು ಕನಸು! ಹೇಳಬೇಕೆನಿಸಿದಾಗ ಅಲ್ಲ, ಹೇಳಲು ಸಮರ್ಥಳಾದಾಗ, ಹೇಳಲೇಬೇಕೆಂಬ ಒತ್ತಡವೂ ಇಲ್ಲದಾಗ...ಹೇಳುವುದು ಅನಿವಾರ್ಯವೆನಿಸಿದಾಗ ಕನಸು ಹಾಡಾಗಿ ಹಬ್ಬಬಹುದು!

- ವಾಣಿ ಪೆರಿಯೋಡಿ..

# ಐ.ಪಿ.ಟಿ. - ಗುಜರಾತ್‌ನಲ್ಲಿ ನಡೆಸಿದ ಸಮೀಕ್ಷೆಯ ವರದಿ

ಪರಿಹಾರವನ್ನು ನೀಡುವ ಹಂತದಲ್ಲಿ ವಿವಿಧ ವರ್ಗದ ಜನರಿಗೆ ಪಕ್ಷಪಾತ ಮಾಡಲಾಗಿದೆ. ಇದು ಅತ್ಯಂತ ಕಾಳಜಿವಹಿಸಬೇಕಾದ ಸಂಗತಿಯಾಗಿದೆ. ಅಲ್ಪಸಂಖ್ಯಾತರು, ದಲಿತರು, ಮೀನುಗಾರರು, ಹಳ್ಳಿಯ ಜನರು, ಅವಿದ್ಯಾವಂತರು ಇಂತಹ ತಾರತಮ್ಯಕ್ಕೆ ಒಳಗಾಗಿದ್ದಾರೆ. ಇದು ಸಂವಿಧಾನ ಬಾಹಿರವಾದದ್ದು ಹಾಗೂ ಅನೈತಿಕವಾದದ್ದು.

ಹಿಂದುಳಿದ ಜಾತಿ ಹಾಗೂ ವರ್ಗದವರಿಗೆ ಪರಿಹಾರ ನೀಡುವಲ್ಲಿ ಆದ ವಂಚನೆಗೆ ರಾಜ್ಯ ಸರ್ಕಾರ ಉತ್ತರವನ್ನು ನೀಡುವ ಜವಾಬ್ದಾರಿಯನ್ನು ಸರ್ಕಾರ ವಹಿಸಿಕೊಳ್ಳಬೇಕಾಗಿದೆ. ಸಂವಿಧಾನಾತ್ಮಕ ಹಕ್ಕುಗಳು ಈ ಜನರಿಗಿವೆ. ಭಾರತದೇಶದ ಅಧ್ಯಕ್ಷರಿಗೆ ಕೆಲವು ನಿರ್ದಿಷ್ಟ ಸಂದರ್ಭದಲ್ಲಿ ವಿಚಾರಣೆ ನಡೆಸಿ ಸತ್ಯ ಸಂಗತಿಗಳಿಗೆ ಪರಿಹಾರ ನೀಡುವ ಅಧಿಕಾರವಿದೆ. ಇದು ಅಂತಿಮವಾಗಿ ತೆಗೆದುಕೊಳ್ಳಬೇಕಾದ ಕ್ರಮವಾಗಬಹುದು.

*- ಕೆ. ಸುಕುಮಾರನ್. ನಿವೃತ್ತ ನ್ಯಾಯಾಧೀಶ*

ಗುಜರಾತಿನಲ್ಲಿ ಭೂಕಂಪನ ದುರಂತ ನಡೆದು ಜನವರಿ 26ಕ್ಕೆ ಒಂದು ವರ್ಷ ಕಳೆಯಿತು. ಈ ದುರಂತ ನಡೆದು ಐದು ತಿಂಗಳ ನಂತರ ಇಂಡಿಯನ್ ಪೀಪಲ್ ಟ್ರಿಬ್ಯೂನಲ್ ತಂಡದವರು ವಿಸ್ತೃತವಾದ ಸಮೀಕ್ಷೆಯನ್ನು ಹಾಗೂ ಸಾರ್ವಜನಿಕ ವಿಚಾರಣೆಯನ್ನು ನಡೆಸಿದರು. ಈ ದುರಂತದಲ್ಲಿ ಬದುಕುಳಿದ ಜನರ ಬದುಕಿಗೆ ಸಂಬಂಧಪಟ್ಟಂತೆ - ವಸತಿ, ಆರೋಗ್ಯ, ಸ್ವಚ್ಛತೆ, ನೀರು, ಪಡಿತರ ವ್ಯವಸ್ಥೆ ಹಣಕಾಸಿನ ನೆರವು ಮುಂತಾದವುಗಳಿಗೆ ಪರಿಹಾರ ನೀಡುವ ಹಂತದಲ್ಲಿ ಜನರ ಮೂಲಭೂತ ಹಕ್ಕುಗಳ ಉಲ್ಲಂಘನೆಯಾಗಿರುವ ಕಣ್ಣಿಗೆ ರಾಚುವ ಸತ್ಯಾಂಶಗಳನ್ನು ಟ್ರಿಬ್ಯೂನಲ್ ಸಾರ್ವಜನಿಕರ ಗಮನಕ್ಕೆ ತಂದಿದೆ. ಆಗಸ್ಟ್ 20 ರಂದು ಕಛ್ ಹಾಗೂ ರಾಜಕೋಟ ಜಿಲ್ಲೆಯಲ್ಲಿ ನಡೆಸಲಾದ ಸಾರ್ವಜನಿಕ ವಿಚಾರಣೆಯನ್ನು ನಿವೃತ್ತ ನ್ಯಾಯಾಧೀಶ ಕೆ. ಸುಕುಮಾರನ್ ರವರ ನೇತೃತ್ವದಲ್ಲಿ ನಡೆಸಲಾಯಿತು. ಈ ವಿಚಾರಣೆಯಲ್ಲಿ 2000ಕ್ಕೂ ಹೆಚ್ಚು ಹಳ್ಳಿಗಳಿಂದ ಜನರ ಪ್ರತಿನಿಧಿಗಳು, ಸಾಮಾಜಿಕ ಸೇವಾಕಾರ್ಯಕರ್ತರು, ಸರ್ಕಾರಿ ಅಧಿಕಾರಿಗಳು ವಿಚಾರಣೆಯಲ್ಲಿ ಭಾಗವಹಿಸಿದ್ದಾರೆ. ಪೀಪಲ್ಸ್ ಟ್ರಿಬ್ಯೂನಲ್‌ನ ವರದಿಯ ಸಂಕ್ಷಿಪ್ತ ರೂಪವನ್ನು ದುರಂತದಲ್ಲಿ ಮಡಿದ ಜನರ ನೆನಪಿಗೆ ಮಾನಸದಲ್ಲಿ ಪ್ರಕಟಿಸಲಾಗುತ್ತಿದೆ.

ಗುರಜಾತ್‌ನಲ್ಲಿ ದುರಂತ ನಡೆದ ಸಂದರ್ಭದಲ್ಲಿ ಮನೆ, ಮಾರು, ಜೀವನಾಧಾರವನ್ನು ಕಳೆದುಕೊಂಡ ಜನರಿಗೆ ವಿವಿಧ ರೀತಿಯ ಪರಿಹಾರವನ್ನು ನೀಡುವುದಾಗಿ ಸರ್ಕಾರ ಭರವಸೆಯನ್ನು ನೀಡಿತ್ತು. ಆದರೆ ಸಾರ್ವಜನಿಕರ ವಿಚಾರಣೆಯಲ್ಲಿ ಭಾಗವಹಿಸಿದ ಬಹುಪಾಲು ಜನರು ಸರ್ಕಾರ ಹಮ್ಮಿಕೊಂಡ ಪರಿಹಾರ ಕಾರ್ಯಗತಗೊಳಿಸುವಲ್ಲಿ ಕಂಡುಬಂದ ಅವ್ಯವಸ್ಥೆಯ ಬಗ್ಗೆ ದೂರು ನೀಡಲಾಯಿತು. ಕುಟುಂಬದಲ್ಲಿ ಸಾವು ನೋವು ಉಂಟಾದ ಸಂದರ್ಭದಲ್ಲಿ ಪರಿಹಾರ ಪಡೆದವರ ಸಂಖ್ಯೆಗಿಂತ ಪರಿಹಾರ ಪಡೆಯದವರ ಸಂಖ್ಯೆಯೇ ಹೆಚ್ಚು. ಹಣದ ರೂಪದಲ್ಲಿ ಪರಿಹಾರವನ್ನು ಪಡೆದವರು ಸಂಪೂರ್ಣವಾಗಿ ಮನೆ ಕುಸಿದು, ನಿರ್ವಸಿತರಾದವರು ಮಾತ್ರ. ವಾಸಯೋಗ್ಯವಲ್ಲದ, ಮನೆಗಳ ಜನರು ಪಡೆದಿರುವ ಪರಿಹಾರದ ಮೊತ್ತ ತೀರಾ ಕಡಿಮೆ. ತೀವ್ರವಾಗಿ ಗಾಯಗೊಂಡವರು ಹೆಚ್ಚಿನ ಪರಿಹಾರವನ್ನು ಪಡೆದಿದ್ದರೆ, ಅಂಗವಿಕಲರು ಪ್ರಮಾಣಪತ್ರವನ್ನು ಪಡೆಯುವುದೇ ದುಸ್ತರವಾಗಿ ಪರಿಹಾರವನ್ನು ಪಡೆಯಲು ಸಾಧ್ಯವಾಗಿಲ್ಲ.

ಪರಿಹಾರ ಕಾರ್ಯವನ್ನು ಕಾರ್ಯಗತ ಗೊಳಿಸುವಲ್ಲಿ ಎದುರಾದ ಸಮಸ್ಯೆಗಳನ್ನು ಮೂರು ರೀತಿಯಲ್ಲಿ ವರ್ಗೀಕರಿಸಬಹುದು. 1) ತೊಂದರೆಗೊಳಗಾದ ಜನರು ವಿವಿಧ ಸ್ವರೂಪದ ಪರಿಹಾರ ಕಾರ್ಯಗಳ ಬಗ್ಗೆ ಮಾಹಿತಿಯನ್ನು ಪಡೆಯದೇ ಇರುವುದು. 2) ಪರಿಹಾರದ ಯೋಜನೆಗಳನ್ನು ಪ್ರಚಾರಗೊಳಿಸದೇ ಇರುವುದು. 3) ಅಧಕಾರಿ ಶಾಹಿ ವರ್ಗ ತಮ್ಮ ಪಾತ್ರದ ಬಗ್ಗೆ ನಿರ್ಲಕ್ಷ್ಯ ತೋರಿಸಿರುವುದು. 4) ನೊಂದವರಿಗೆ ಪರಿಹಾರ ನೀಡಲು ಏಕಸ್ವರೂಪದ ಮಾರ್ಗಸೂಚಿಗಳಿಲ್ಲದೇ ಇರುವುದು.

ಪರಿಹಾರ ನೀಡುವಲ್ಲಿ ಭ್ರಷ್ಟಾಚಾರದ

ಆರೋಪಗಳು ಯಥೇಚ್ಛವಾಗಿ ಕಂಡು ಬಂದವು. ಅಧಿಕಾರಿಗಳ ಹಂತದಲ್ಲಿ ಹಾಗೂ ಹಳ್ಳಿಯ ಮುಖಂಡರ ಹಂತದಲ್ಲಿ ಭ್ರಷ್ಟಾಚಾರ ನಡೆದಿರುವುದು ಸ್ಪಷ್ಟವಾಗಿ ಕಂಡು ಬಂದಿತು. ಭೂಕಂಪ ನಡೆದ ಸಂದರ್ಭದಲ್ಲಿ ಹಳ್ಳಿಗಳ ಸ್ಥಿತಿ ದಾರುಣವಾಗಿತ್ತು. ಭೂಕಂಪ ಉಂಟಾದಾಗ ಅದನ್ನು ಹೇಗೆ ಎದುರಿಸಬೇಕೆಂಬುದರ ಬಗ್ಗೆ ಮಾಹಿತಿ, ತರಬೇತಿಯ ಕೊರತೆ ಪ್ರಮುಖವಾಗಿ ಕಂಡುಬಂದಿದೆ. ಗುಜರಾತ್ ರಾಜ್ಯದಲ್ಲಿ ಆಗಾಗ ಚಂಡಮಾರುತ, ನೆರೆಹಾವಳಿ, ಬರಗಾಲ, ನೈಸರ್ಗಿಕ ಸಮಸ್ಯೆಯನ್ನು ಎದುರಿಸುತ್ತಿದ್ದು ಅವುಗಳನ್ನು ಎದುರಿಸುವಲ್ಲಿ ವೈಜ್ಞಾನಿಕ ಯೋಜನೆ, ತಯಾರಿಯ, ಮುನ್ನೆಚ್ಚರಿಕೆಯ ಕ್ರಮದ ಕೊರತೆ ಕಂಡುಬಂದಿದೆ. ಇಂತಹ ವಿಕೋಪಗಳನ್ನು ಎದುರಿಸಲು ಶಾಸನಗಳನ್ನು ಮಾಡುವ ತುರ್ತು ಅಗತ್ಯ ತೀವ್ರವಾಗಿದೆ.

ಇಂತಹ ದುರಂತಗಳಿಗೆ ಒಳಗಾದ ಜನರಿಗೆ ಸಂವಿಧಾನದ ಆರ್ಟಿಕಲ್ 21ರ ಪ್ರಕಾರ ಪ್ರತಿಯೊಬ್ಬ ನಾಗರೀಕನಿಗೂ/ನಾಗರೀಕಳಿಗೂ ಬದುಕುವ ಹಕ್ಕು, ವೈಯಕ್ತಿಕ ಸ್ವಾತಂತ್ರ್ಯದ ಹಕ್ಕನ್ನು ನೀಡಲಾಗಿದೆ. ಊಟ, ವಸತಿ, ನೀರು, ಆರೋಗ್ಯ ಮುಂತಾದವುಗಳನ್ನು ಪಡೆಯುವುದು ಮೂಲಭೂತ ಹಕ್ಕಾಗಿದೆ. ಆಗಾಗ ಸರ್ವೋಚ್ಛ ನ್ಯಾಯಾಲಯವು ರಾಜ್ಯ ಸರ್ಕಾರದ ಜವಾಬ್ದಾರಿಯನ್ನು ನೆನಪಿಸಿದೆ.

ಆರೋಗ್ಯ : ಕಚ್ ಪ್ರದೇಶದಲ್ಲಿ ತುರ್ತು ಆರೋಗ್ಯ ವ್ಯವಸ್ಥೆಯ ಸಂಪೂರ್ಣ ಕೊರತೆ ಕಂಡುಬಂದಿತು. ಇಲ್ಲಿಗೆ ಬರಬೇಕಾದ ಸೇವೆಗಳು ಭುಜ್, ಗಾಂಧಿಧಾಮದಿಂದ ಬರಬೇಕಾಗಿತ್ತು. ಸಮೀಕ್ಷೆ ನಡೆಸಿದ ಬಹುತೇಕ ಸದಸ್ಯರು ಸೂಕ್ತವಾದ ನೆರವು, ಮಾರ್ಗದರ್ಶನದ ಕೊರತೆಯ ಬಗ್ಗೆ ದೂರು ನೀಡಿದರು. ಅನಿವಾರ್ಯವಾದ ಸಂದರ್ಭದಲ್ಲಿ ಖಾಸಗೀ ವೈದ್ಯರ ಬಳಿ ಹೋಗುವುದು ಅನಿವಾರ್ಯವಾಗಿತ್ತು. ಅಂಜಾಲ್ ಹಾಗೂ ಸತಾಪುರದ ಜನರು ಸರ್ಕಾರಿ ಆಸ್ಪತ್ರೆಗಳ ಅವ್ಯವಸ್ಥೆಯ ಬಗ್ಗೆ ಅತೃಪ್ತಿಯಿಂದ ಮಾತನಾಡಿದರು. ಬಹಳಷ್ಟು ಜನರ ಕಾಲಿಗೆ ಹಾಕಲಾದ ಸ್ಕ್ರೂ, ಸ್ಟೀಲ್ ರಾಡ್‌ಗಳನ್ನು ತೆಗೆಯಬೇಕಾಗಿತ್ತು. ಸೆಟ್ ಆಗದ ಮೂಳೆಗಳು, ಹೃದಯದ ತೊಂದರೆಗಳಿಗೆ ನಂತರದ ಆರೈಕೆಯ ಚಿಕಿತ್ಸೆಯ ಅಗತ್ಯ ತುಂಬಾ ಇತ್ತು. ರಾಣಿಬೆನ್ ಅಹಿತ್ ಎಂಬವರು ಇಂತಹ ಸಂದರ್ಭದಲ್ಲಿ ಸ್ತ್ರೀ ಪರವಾದ ಆರೋಗ್ಯ ಧೋರಣೆಯ ಅಗತ್ಯವನ್ನು ಒತ್ತಿ ಹೇಳಿದರು.

ಕಚ್ ಪ್ರದೇಶದ ಜನರು ನೀರಿನ ಸೌಲಭ್ಯದಿಂದ ವಂಚಿತರಾಗಿದ್ದಾರೆ. ನೀರಿನ ಸೌಲಭ್ಯಕ್ಕಾಗಿ ಜನರು ಸರ್ಕಾರದ ಟ್ಯಾಂಕುಗಳನ್ನು ಅವಲಂಬಿಸಿದ್ದಾರೆ. ಅಂಜಾಲ್ ಹಾಗೂ ಕೂಲಿಯಲ್ಲಿ ದಲಿತರು ಹಾಗೂ ಮುಸ್ಲಿಂರು ನೀರಿಗಾಗಿ ಪರದಾಡುವ ಸ್ಥಿತಿ ಕಣ್ಣಿಗೆ ರಾಚುವಂತಹುದು. ಈ ಜನರು ನೀರಿಗಾಗಿ ತಾರತಮ್ಯ ಎದುರಿಸುತ್ತಿರುವುದು ಕಂಡುಬರುತ್ತದೆ.

ಕಚ್ ಪ್ರದೇಶದ ಜನರಿಗೆ ಬಹಳಷ್ಟು ವರ್ಷಗಳಿಂದ ಪಡಿತರ ಚೀಟಿಯನ್ನು ಕೊಟ್ಟಿರಲಿಲ್ಲ. ಮೊದಲು ಒಟ್ಟು ಕುಟುಂಬದಲ್ಲಿ ವಾಸಿಸುತ್ತಿದ್ದು ಕ್ರಮೇಣ ಪ್ರತ್ಯೇಕವಾಗಿ ವಾಸಿಸುತ್ತಿದ್ದರೂ, ಅವರಿಗೆ ಪಡಿತರ ಚೀಟಿ ಇಲ್ಲದ ಕಾರಣ ಪರಿಹಾರವನ್ನು ನೀಡಲಿಲ್ಲ. ಕಚ್ ಹಾಗೂ ರಾಜಕೋಟ ಜನರಿಗೆ ಪಡಿತರ ಚೀಟಿಯೇ ಜೀವನ್ಮರಣದ ಪ್ರಶ್ನೆಯಾಗಿತ್ತು. ಹೀಗೆ ಅನ್ಯಾಯಕ್ಕೊಳಗಾದ ಜನರು ಸಾರ್ವಜನಿಕ ಪ್ರತಿಭಟನೆಯನ್ನು ಏರ್ಪಡಿಸಿದ್ದರು. ಈ ಬಗ್ಗೆ ದೂರದರ್ಶನದಲ್ಲಿ ಹೆಚ್ಚು ಪ್ರಚಾರವನ್ನು ನೀಡಲಾಗಿತ್ತು. ಆದರೂ ಅಧಿಕಾರ ಈ ಬಗ್ಗೆ ಸಂಪೂರ್ಣ ನಿರ್ಲಿಪ್ತವಾಗಿತ್ತು. ಈ ಪ್ರದೇಶದ ಬಹುಪಾಲು ಮಹಿಳೆಯರು ಮತ್ತು ಮಕ್ಕಳು ಅಪೌಷ್ಟಿಕತೆಯಿಂದ ನರಳುತ್ತಿದ್ದರು. ಭೂಕಂಪನದ ನಂತರ ಅಂಗನವಾಡಿ ಕೇಂದ್ರಗಳನ್ನು ಮುಚ್ಚಲಾಗಿತ್ತು. ಅಂಗನವಾಡಿಯ ಕಟ್ಟಡಗಳೂ ಸಹ ಕುಸಿದು ಬಿದ್ದಿದ್ದವು. ಭೂಕಂಪನವಾಗಿ ತಿಂಗಳುಗಳಾಗಿದ್ದರೂ ಇಂತಹ ಕೇಂದ್ರಗಳನ್ನು ಪುನಃ ಪ್ರಾರಂಭಿಸಲಾಗಿಲ್ಲ. ಹಾಗಾಗಿ ಗರ್ಭಿಣಿ ಹೆಂಗಸರು, ಮಕ್ಕಳು, ಬಾಣಂತಿಯರು ಅಪೌಷ್ಟಿಕತೆಯಿಂದ ನರಳುತ್ತಿದ್ದಾರೆ. ಮೂರುವರ್ಷ ಬರಗಾಲವನ್ನು ಅನುಭವಿಸಿದ ನಂತರ ಈ ಪ್ರದೇಶದ ಜನರು ಭೂಕಂಪನವನ್ನು ಎದುರಿಸಿರುವುದನ್ನು ನಾವು ನೆನಪಿಟ್ಟುಕೊಳ್ಳಬೇಕು. ಮೊದಲೇ ಕಡಿಮೆ ಆಹಾರದಿಂದ ನರಳುತ್ತಿದ್ದ ಮಹಿಳೆಯರು, ಮಕ್ಕಳು, ಹೆಚ್ಚು ಹೆಚ್ಚು ನರಳುವಂತಾಗಿದೆ. ಹಾಗಾಗಿ ಮೂಲಭೂತವಾದ ಆರೋಗ್ಯ ಹಕ್ಕುಗಳಿಂದ ಜನರು ವಿಶೇಷವಾಗಿ ಮಹಿಳೆಯರು ವಂಚಿತರಾಗಿರುವುದು ಕಂಡು ಬಂದಿದೆ.

ಸಾರ್ವಜನಿಕ ಆರೋಗ್ಯ ಕೇಂದ್ರಗಳಲ್ಲಿ ತಪಾಸಣೆಗೆ ಅಗತ್ಯವಾದ ಉಪಕರಣಗಳ ಕೊರತೆ ಮುಖ್ಯವಾಗಿ ಕಂಡು

ಬಂದಿತು. ಇಂತಹ ಕೇಂದ್ರಗಳಲ್ಲಿ ಕೆಲವೇ ಹೆರಿಗೆಗಳನ್ನು ಮಾಡಲಾಗುತ್ತಿತ್ತು. ಮಹಿಳೆಯರು ಹೆರಿಗೆಗಾಗಿ 100 ಕ್ಕಿಂತಲೂ ಹೆಚ್ಚು ಕಿ.ಮೀ. ದೂರದ ಭುಜ್‌ಗೆ ಹೋಗಬೇಕಾಗುತ್ತಿತ್ತು. ಕ್ಷಯರೋಗದ ತಪಾಸಣೆಗೆ ದೂರದ ಭುಜ್‌ಗೆ ಹೋಗಬೇಕಾಗುತ್ತಿತ್ತು. ಇಲ್ಲಿ ಟೆಂಟ್‌ಗಳಲ್ಲಿ ತಪಾಸಣೆ ಮಾಡಲಾಗುತ್ತಿತ್ತು. ಇಲ್ಲಿ ತಜ್ಞರ , ವಿಶೇಷವಾಗಿ ಸ್ತ್ರೀರೋಗ ತಜ್ಞರ ಕೊರತೆ ಇತ್ತು. ಕೇವಲ ಸಣ್ಣಪುಟ್ಟ ಗಾಯಗಳಿಗೆ ಹೊಲಿಗೆ ಹಾಕಲಾಗುತ್ತಿತ್ತೇ ವಿನಃ ಶಸ್ತ್ರಚಿಕಿತ್ಸೆಯ ಅಗತ್ಯವಿದ್ದವರಿಗೆ ಮಾಡುವ ಸೌಲಭ್ಯವಿರಲಿಲ್ಲ. ಮಲೇರಿಯಾ ಬಗ್ಗೆ ವಿವರವಾದ ತಪಾಸಣೆಯನ್ನು ಮಾಡದೇ ಎಲ್ಲರಿಗೂ ಗುಳಿಗೆಗಳನ್ನು ನೀಡಿ ಕಳಿಸಲಾಗುತ್ತಿತ್ತು. ಅಂಗನವಾಡಿ ಕೇಂದ್ರಗಳನ್ನು ಮುಚ್ಚಿದ್ದರಿಂದ ಮಕ್ಕಳಿಗೆ ನೀಡಬೇಕಾದ ರೋಗ ನಿರೋಧಕ ಚುಚ್ಚುಮದ್ದು, ಲಸಿಕೆಗಳನ್ನು ನೀಡುತ್ತಿರಲಿಲ್ಲ. ಅಂಗನವಾಡಿಗೆ ಯಾವುದೇ ಪರ್ಯಾಯ ವ್ಯವಸ್ಥೆಯನ್ನು ಮಾಡಲಾಗಿಲ್ಲ. ಶಸ್ತ್ರಚಿಕಿತ್ಸೆಯನ್ನು ಮಾಡಿಸಿಕೊಂಡ ಜನರಿಗೆ, ಗಾಲಿಕುರ್ಚಿ, ಕೃತಕ ಕಾಲುಗಳನ್ನು ನೀಡಲಾಗಿದ್ದರೂ, ಅವರಿಗೆ ಪರಿಹಾರ ಪಡೆಯಲು ತಾತ್ಕಾಲಿಕ ಸರ್ಟಿಫಿಕೇಟ್‌ಗಳನ್ನು ನೀಡಲಾಗಿದೆಯೇ ಹೊರತು ಖಾಯಂ ಸರ್ಟಿಫಿಕೇಟ್‌ಗಳನ್ನು ನೀಡುತ್ತಿಲ್ಲ. ಜೊತೆಗೆ 1995ರ ಅಂಗವಿಕಲತೆಗೆ ಸಂಬಂಧಪಟ್ಟ ಕಾಯಿದೆಯ ಪರಿಚಯ ಜನರಿಗೆ ಇಲ್ಲ.

ಸಮೀಕ್ಷೆಯಲ್ಲಿ ಹಾಗೂ ವಿಚಾರಣೆಯಲ್ಲಿ ಪ್ರಮುಖವಾಗಿ ಕಂಡುಬಂದ ಅಂಶವೆಂದರೆ ಯಾರು ರಾಜಕೀಯ ನಾಯಕತ್ವದ ವಲಯಕ್ಕೆ ಹತ್ತಿರವಾಗಿರುತ್ತಾರೋ ಹಾಗೂ ರಾಜಕೀಯ ಪ್ರಭಾವ ಬೀರಲು ಶಕ್ತಿಯುತವಾಗಿರುತ್ತಾರೋ ಅಂತಹವರು ಪರಿಹಾರ ಹಾಗೂ ಪುನರ್‌ವಸತಿಯ ಬಗ್ಗೆ ಹೆಚ್ಚಿನ ಮಾಹಿತಿ ಹಾಗೂ ಸೌಲಭ್ಯವನ್ನು ಪಡೆಯುತ್ತಾರೆ. ಪರಿಹಾರವನ್ನು ಹೆಚ್ಚು ವರ್ಗ ಹಾಗೂ ಜನಾಂಗ, ಜಾತಿಯ ಆಧಾರದ ಮೇಲೆ ನೀಡಲಾಗಿದ್ದನ್ನು ಗಮನಿಸಬಹುದಾಗಿದೆ.

ಬಡವರು, ಸಾಮಾಜಿಕವಾಗಿ ಹಿಂದುಳಿದವರು, ಶಕ್ತಿಯುತ ರಾಜಕೀಯ ವಲಯಕ್ಕೆ ಹೊರತಾದವರು ಹೆಚ್ಚು ಸಂಕಷ್ಟಕ್ಕೆ ಒಳಗಾಗಿದ್ದಾರೆ. ಅವರ ಮೂಲಭೂತ ಹಕ್ಕುಗಳಿಂದ ಹಾಗೂ ಅವರಿಗೆ ದೊರೆಯಬೇಕಾದ ಪರಿಹಾರ ಸೌಲಭ್ಯಗಳಿಂದಲೂ ವಂಚಿಸಲಾಗಿದೆ. ಗ್ರಾಮೀಣ ಪ್ರದೇಶದ ಜನರು ಹೆಚ್ಚು ತಾರತಮ್ಯಕ್ಕೆ ಒಳಗಾಗಿರುವುದು ಕಂಡು ಬರುತ್ತದೆ.

ಇಂತಹ ನೈಸರ್ಗಿಕ ದುರಂತಗಳ ಬಗ್ಗೆ ಸರ್ಕಾರದ ಸೀಮಿತ ದೃಷ್ಟಿಕೋನಗಳನ್ನು ವಿಮರ್ಶಾತ್ಮಕವಾಗಿ ನೋಡಬೇಕಾಗುತ್ತದೆ. ಕೇವಲ ಮನೆ ಕುಸಿದಿರುವ ದೃಷ್ಟಿಕೋನದಿಂದ ನೋಡದೆ ಜೀವನ, ಬದುಕಿನ ಹಕ್ಕು, ಜನರ ಹಕ್ಕು ಭಾದ್ಯತೆಯ ದೃಷ್ಟಿಕೋನದಿಂದ ನೋಡಬೇಕಾಗುತ್ತದೆ.

ಕೆಲವು ಹಳ್ಳಿಗಳನ್ನು ದತ್ತು ತೆಗೆದುಕೊಳ್ಳುವುದರ ಮೂಲಕ ಸರ್ಕಾರ ಪರಿಹಾರದ ಕಾರ್ಯವನ್ನು ಬಹುರಾಷ್ಟ್ರೀಯ ಕಂಪನಿಗಳ ಜೊತೆ ಸೇರಿ ಪರಿಹಾರ ಕಾರ್ಯವನ್ನು ಖಾಸಗೀಕರಣಗೊಳಿಸಲು ಪ್ರಯತ್ನಿಸಿದೆ. ಲಾಭ ನಷ್ಟದ ಲೆಕ್ಕಾಚಾರದ ಮೂಲಕ ಪರಿಹಾರ ಕಾರ್ಯವನ್ನು ನೋಡುವ ಪ್ರಯತ್ನವನ್ನು ಸರ್ಕಾರ ಮಾಡಿದೆ. ಆದೋಯಿ ಎಂಬ ಹಳ್ಳಿಯಲ್ಲಿ ದತ್ತು ಕಾರ್ಯಕ್ರಮವು ಸಂಪೂರ್ಣವಾಗಿ ವಿಫಲವಾಯಿತಲ್ಲದೆ ಜಾತಿ ಹಾಗೂ ಜನಾಂಗದ ಸಂಘರ್ಷಕ್ಕೆ ಅವಕಾಶವನ್ನು ನೀಡಿದೆ. ಪರಿಹಾರ ಕಾರ್ಯದಲ್ಲಿ ತೊಡಗಿದ ವಿವಿಧ ಸಂಘ-ಸಂಸ್ಥೆಗಳ ನಡುವೆ ಹೊಂದಾಣಿಕೆ ಇಲ್ಲದಿರುವುದು ಸಹ ಕಂಡು ಬಂದಿದೆ.

ಭೂಕಂಪದಿಂದಾಗಿ ಕಚ್ ಪ್ರದೇಶದ ಆರ್ಥಿಕತೆ ಸಂಪೂರ್ಣವಾಗಿ ಕುಸಿದು ಬಿದ್ದಿದೆ. ಈ ಪ್ರದೇಶದ ಜನರು ಪರಿಹಾರ ಕಾರ್ಯದ ಅಸಮರ್ಪಕತೆಯ ಬಗ್ಗೆ ಪ್ರತಿಭಟನೆಯನ್ನು ವ್ಯಕ್ತ ಪಡಿಸಿದ್ದಾರೆ. ಭೂಕಂಪನನ್ನಾದರೂ ಎದುರಿಸಬಹುದು, ಆದರೆ ಸರ್ಕಾರ ಕೆಲಸ ಮಾಡುವ ವಿಧಾನವನ್ನು ಎದುರಿಸುವುದು ಅದಕ್ಕಿಂತ ದೊಡ್ಡ ಸವಾಲಾಗಿದೆಯೆಂದು ಜನರು ಭಾವಿಸುತ್ತಾರೆ.

ವಸತಿ ನಿರ್ಮಾಣಕ್ಕಾಗಿ ನೀಡಲಾದ ಪರಿಹಾರವನ್ನು ಮನಸೋ ಇಚ್ಛೆ ನೀಡಲಾಗಿದೆ. ಮನೆಯ ಅಂದಾಜು ವೆಚ್ಚದ ವ್ಯವಸ್ಥಿತವಾದ ಮೌಲ್ಯ ಮಾಪನವನ್ನು ಮಾಡಲಾಗಿಲ್ಲ. ಕೆಲವರು ವಿಶೇಷವಾಗಿ ವಿಧವೆಯರು, ಪರಿತ್ಯಕ್ತ ಮಹಿಳೆಯರು ಅನಾಥರು, ಅಂಗವಿಕಲರು ವಸತಿ ಸೌಲಭ್ಯವನ್ನು ಪಡೆಯುವಲ್ಲಿ ಹೆಚ್ಚು ವಂಚಿತರಾಗಿರುವುದು ಕಂಡು ಬರುತ್ತದೆ. ದೊಡ್ಡ ದೊಡ್ಡ ಜಮೀನ್ದಾರರಲ್ಲಿ

ಗೇಣಿದಾರರಾಗಿ ಕೆಲಸ ಮಾಡುತ್ತಿದ್ದ ಬಡವರು ಪರಿಹಾರದಿಂದ ವಂಚಿತರಾಗಿದ್ದಾರೆ. ಜಮೀನ್ದಾರರೇ ಎಲ್ಲಾ ಪರಿಹಾರ ಪಡೆದಿದ್ದಾರೆ. ಮನೆಗಳು ಪಡೆಯುವಲ್ಲಿ ಪಡಿತರ ಚೀಟಿ ಮುಖ್ಯವಾದ ಪಾತ್ರವನ್ನು ವಹಿಸುತ್ತಿದೆ. ಮಹಿಳೆಯರಿಗೆ ಇದು ದೊಡ್ಡ ಸಮಸ್ಯೆಯಾಗಿರುವುದರಿಂದ, ಅವರು ಪರಿಹಾರವನ್ನು ಪಡೆಯುವಲ್ಲಿ ಹೆಚ್ಚು ವಂಚಿತರಾಗಿದ್ದಾರೆ. ಆಸ್ತಿಯೆಲ್ಲವೂ ಗಂಡಸರ ಹೆಸರಿನಲ್ಲಿರುವುದರಿಂದ ಸಹ ಮಹಿಳೆಯರೇ ಪರಿಹಾರವನ್ನು ಪಡೆಯುವಲ್ಲಿ ವಿಫಲರಾಗಿದ್ದಾರೆ. ಪಕ್ಕಾ ಮನೆಗಳ ಬೆಲೆಯನ್ನು ಒಂದು ಚದುರ ಅಡಿಗೆ 2000ರಂತೆ, 90,000 ದವರೆಗೆ ನಿರ್ಧರಿಸಲಾಗಿದೆ. ಆದರೆ ಕಚ್ಚಾ ಎಂದು ಪರಿಗಣಿಸಲಾದ ಮನೆಗಳಿಗೆ 1200ರಿಂದ 3000 ವರೆಗೆ ನಿರ್ಧರಿಸಲಾಗಿದೆ. ಈ ತಾರತಮ್ಯದ ಹಿಂದಿರುವ ದೃಷ್ಟಿಕೋನವನ್ನು ಪ್ರಶ್ನಿಸಬೇಕಾಗುತ್ತದೆ. ಸಮತಿಯಾಲಿ ಎಂಬ ಹಳ್ಳಿಯಲ್ಲಿ ಕೆಳ ಜಾತಿಯ ಜನರಿಗೆ ಮನೆಯನ್ನು ನೀಡುವಲ್ಲಿ ಪಕ್ಷಪಾತ ಮಾಡಿರುವುದನ್ನು ವಿಚಾರಣೆ ನಡೆಸುವ ಸಂದರ್ಭದಲ್ಲಿ ಗಮನಕ್ಕೆ ತರಲಾಯಿತು. ಸಾಲ ಮರುಪಾವತಿ ನೀತಿಯು ಅಸ್ಪಷ್ಟತೆಯಿಂದ ಕೂಡಿದೆ. ದಾಖಲೆಗಳ ಕೊರತೆ, ಅಧಿಕಾರಿಗಳ ಗೈರುಹಾಜರಿ, ಮುಂತಾದವುಗಳಿಂದಾಗಿ ಪುನರ್ವಸತಿ ಕಾರ್ಯದಲ್ಲಿ ತೊಡಕುಂಟಾಗುತ್ತಿದೆ. ಕಟ್ಟಡಗಳ ನಿರ್ಮಾಣವನ್ನು ವೈಜ್ಞಾನಿಕವಾಗಿ ಮಾಡಬೇಕಾಗಿದೆ. ನವಲಾತಿಯಲ್ಲಿ ಬೃಹತ್ತಾದ ಬಂದರನ್ನು ನಿರ್ಮಾಣ ಮಾಡುವ ಉದ್ದೇಶವಿರುವುದರಿಂದ ಸುಮಾರು 1200 ಮೀನುಗಾರರ ಕುಟುಂಬಗಳನ್ನು ಭೂಕಂಪದ ನೆಪದಲ್ಲಿ ಎತ್ತಂಗಡಿ ಮಾಡಲಾಗಿದೆ. ವಸತಿ ಹಕ್ಕನ್ನು ಆಸ್ತಿಯ ಹಿನ್ನಲೆಯಲ್ಲಿ ನೋಡಲಾಗಿದೆಯೇ ವಿನಃ ದುರಂತದ ಪರಿಣಾಮದ ಆಧಾರದ ಮೇಲೆ ನೋಡಲಾಗುತ್ತಿಲ್ಲ. ಜನರಿಗೆ ನೀಡಬೇಕಾದ ಮಾಹಿತಿಯನ್ನು ನೀಡುತ್ತಿಲ್ಲ. ಅಧಿಕಾರ ಶಾಹಿಯಲ್ಲಿ ಕಂಡುಬರುತ್ತಿರುವ ದೀರ್ಘಕಾಲದ ಸುರಕ್ಷಿತ ವಸತಿಯನ್ನು ರೂಪಿಸುವುದರ ಬಗ್ಗೆ ಆಲೋಚನೆಯಾಗಲಿ, ಚಿಂತನೆಯಾಗಲೀ, ಕಂಡುಬರುವುದಿಲ್ಲ.

ಭೂಕಂಪದಲ್ಲಿ ನೊಂದವರಿಗೆ ಸರಕಾರದ ಪರಿಹಾರ ಕಾರ್ಯದ ಯೋಜನೆಯ ಬಗ್ಗೆ ಮಾಹಿತಿಯ ಕೊರತೆಯನ್ನು ಕಾಣಬಹುದು. ಯೋಜನೆಗಳಲ್ಲಿ ಗೊಂದಲ, ಕಾರ್ಯಗತಗೊಳಿಸುವಲ್ಲಿ ಅಸ್ಪಷ್ಟತೆಯು ಕಂಡುಬರುತ್ತಿತ್ತು. ದೀರ್ಘಾವಧಿಯ ಪರಿಹಾರಕ್ಕಿಂತ ತಾತ್ಕಾಲಿಕ ಪರಿಹಾರ ಕಾರ್ಯಕ್ರಮಗಳು ಪ್ರಾಮುಖ್ಯತೆಯನ್ನು ಪಡೆದಿದ್ದವು. ಸ್ಪಷ್ಟಯೋಜನೆಯ ವಿವರವನ್ನು ಜನರ ಮುಂದಿಡುವಲ್ಲಿ ಸರ್ಕಾರ ವಿಫಲವಾಗಿದೆ.

ವಿಸ್ತೃತವಾದ ವಿಚಾರಣೆಯ ನಂತರ ಇಂಡಿಯನ್ ಪೀಪಲ್ ಟ್ರಿಬ್ಯೂನಲ್ ಕೆಳಕಂಡ ಸಲಹೆಗಳನ್ನು ಸೂಚಿಸಿದೆ. ಕೆಲವು ಪ್ರಮುಖವಾದ ಸಲಹೆಗಳು ಈ ರೀತಿ ಇವೆ.

ಸರ್ಕಾರಿ ಆಸ್ಪತ್ರೆಗಳನ್ನು ಸುಸಜ್ಜಿತಗೊಳಿಸುವುದು ಸಾರಿಗೆ ವ್ಯವಸ್ಥೆಯನ್ನು ಸುಗಮಗೊಳಿಸುವುದು, ಕುಸಿದು ಬಿದ್ದ ಆಸ್ಪತ್ರೆಗಳ ಪುನರ್‌ನಿರ್ಮಾಣ, ಸಿಬ್ಬಂದಿವರ್ಗದವರಿಗೆ ತಾಂತ್ರಿಕ ತರಬೇತಿ, ಶಸ್ತ್ರ ಚಿಕಿತ್ಸೆಯ ನಂತರದ ತಪಾಸಣೆ, ಆಧುನಿಕ ಉಪಕರಣ, ಶಸ್ತ್ರ ಚಿಕಿತ್ಸೆಯ ಸೌಲಭ್ಯ, ಅಂಗವಿಕಲರಿಗೆ ಅಗತ್ಯವಾದ ಮನೆಯ ನಿರ್ಮಾಣ ಯೋಜನೆಯನ್ನು ಪ್ರಾಮಾಣಿಕವಾಗಿ ಹಾಗೂ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದು. ದುಡಿಯುವ ವರ್ಗದ ಜನರ ಸಂಪೂರ್ಣ ಅಭಿವೃದ್ಧಿಯ ಯೋಜನೆ, ಫಲವತ್ತಾದ ಭೂವಿತರಣೆ, ಗ್ರಾಮೀಣ ಮಟ್ಟದ ಕಮ್ಯೂನಿಟಿ ಆಧಾರಿತ ಕೆಲಸಗಳು, ಜನರಿಗೆ ನೈಸರ್ಗಿಕ ದುರಂತವನ್ನು ಎದುರಿಸುವ ತರಬೇತಿ, ದೀರ್ಘಕಾಲಿಕ ಯೋಜನೆ, ಭ್ರಷ್ಟಾಚಾರವನ್ನು ಕಡಿಮೆ ಮಾಡುವುದು, ಆರ್ಥಿಕ, ಸಾಮಾಜಿಕ, ದೃಷ್ಟಿಕೋನದಿಂದ ಸಮಸ್ಯೆಗಳನ್ನು ನೋಡುವುದು.

ಕನ್ನಡಕ್ಕೆ – ರಾಜೇಶ್ವರಿ ಎಚ್.ಎಸ್.

*ಮಾನಸ ಬಳಗದ ಸದಸ್ಯರು ಪ್ರತಿ 2ನೇ ಶನಿವಾರದಂದು ರವೀಂದ್ರ ಕಲಾಕ್ಷೇತ್ರದ ಸಂಸ ಬಯಲು ರಂಗಮಂದಿರದ ಬಳಿ ಸಮಯ ಸಂಜೆ 4 ರಿಂದ 6 ಗಂಟೆಗಳವರೆಗೂ ಸಭೆ ಸೇರುತ್ತೇವೆ. ಮಾನಸ ಬಳಗದ ಸದಸ್ಯರನ್ನು ಸಂಪರ್ಕಿಸಲು ಇಚ್ಛಿಸುವವರು ಇಲ್ಲಿ ಭೇಟಿಯಾಗಬಹುದು.*

*– ಸಂಪಾದಕೀಯ ಮಂಡಳಿ*

# ದು. ಸರಸ್ವತಿ ಅವರ "ಈಗೇನ್ ಮಾಡೀರಿ?" ಪುಸ್ತಕ ಬಿಡುಗಡೆ ಸಮಾರಂಭದ ವರದಿ

ಮಾನಸದ ಸದಸ್ಯೆ ಹಾಗೂ ವಿವಿಧ ಮಹಿಳಾಪರ ಹೋರಾಟಗಳಲ್ಲಿ ಗುರುತಿಸಿಕೊಂಡಿರುವ ಸರಸ್ವತಿ. ದು ಅವರ "ಈಗೇನ್ ಮಾಡೀರಿ?" ಪುಸ್ತಕ ಬಿಡುಗಡೆ ಸಮಾರಂಭ ಡಾ॥ ವಿಜಯಾ ಅವರ ಅಧ್ಯಕ್ಷತೆಯಲ್ಲಿ ಡಿಸೆಂಬರ್ 23ರಂದು ಬೆಂಗಳೂರಿನ ಗಾಂಧಿ ಭವನದಲ್ಲಿ ನಡೆಯಿತು.

ಮಾನಸ ಹಾಗೂ ನಾಗರೀಕ ಹಕ್ಕುಗಳ ಸಮಿತಿಯ ಜಂಟಿ ಆಶ್ರಯದಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ, ಲೇಖಕಿಯ ತಂದೆ ಎ.ಜಿ. ದುರ್ಗಪ್ಪ ಅವರು ಪುಸ್ತಕ ಬಿಡುಗಡೆ ಮಾಡಿದರು.

ಖ್ಯಾತ ವಿಮರ್ಶಕರಾದ ಡಾ॥ ಎಚ್.ಎಸ್. ರಾಘವೇಂದ್ರರಾವ್ ಅವರು ಪುಸ್ತಕ ಕುರಿತು ಮಾತನಾಡುತ್ತಾ, ನಿರಾಪರಾಧಿ ಯಾತನೆಯ, ದನಿ ಕಳೆದವರ, ಜೀವನ ಶ್ರದ್ಧೆಯ ಅನುಭವ ಕಥನ ಇದಾಗಿದೆ ಎಂದರು.

ತನ್ನ ನೋವನ್ನು ಬದಿಗಿಟ್ಟು ಸಮುದಾಯದ ನೋವುಗಳಲ್ಲಿ ಬದುಕನ್ನ ಕಂಡುಕೊಂಡ ಸರಸ್ವತಿ ಅವರ ಬಾಲ್ಯ ವಿಚಿತ್ರವಾದ ಲಕ್ಷಣ ಕಟ್ಟಿಕೊಡುವ ಅವಮಾನಗಳ ಬಾಲ್ಯವಲ್ಲ. ಅದು ಶಕ್ತಿ ಕೊಡುವುದನ್ನ ಹೇಳುತ್ತದೆ...ಅವ್ವನ ಪ್ರತಿ ಮಾತು ಪ್ರೇರಣೆಯಾಗಿ, ಮಗಳ ಬಳಿಗೇ ತಾಯಿ ಇರುವುದು ಧೈರ್ಯ ಹೇಳುವುದನ್ನ ಕಾಣಬಹುದೆಂದರು.

ಮುಂದುವರೆದ ಅವರು, ಬಾಲ್ಯ, ಶಿಕ್ಷಣ, ಪ್ರಾಯ, ಕಾಲೇಜು ಮಟ್ಟದ ವಿವಿಧ ಸವಾಲುಗಳನ್ನು ಹೇಳುವ ಕಥನ, ಬದುಕಿನಲ್ಲಿ ಎದುರಾದ ಅನಿರೀಕ್ಷಿತ ಕಠಿಣ ಸನ್ನಿವೇಶದ ನೋವುಗಳ ನಡುವೆಯೇ ಬದುಕನ್ನ ರೂಪಿಸಿಕೊಂಡ, ಜೀವನ ಶ್ರದ್ಧೆಯನ್ನು ಹೇಳುತ್ತದೆ. ಯಾವುದೋ ಒಂದು ನಂಬಿಕೆಯ ಮೇಲೆ ಚೂರಾದ ಬದುಕನ್ನು ಕಟ್ಟಿಕೊಳ್ಳುವುದನ್ನು ಹೇಳುವ ಬಹುರೂಪಿ ಕಥನವಾಗಿದೆ ಎಂದು ಅಭಿಪ್ರಾಯಪಟ್ಟರು.

ಕಥನದ ನಿರೂಪಣೆಯಲ್ಲಿ ಬೇರೆ ಬೇರೆ ಭಾವಕ್ಕೆ ಬೇರೆ ಬೇರೆ ಭಾಷೆಯ ಉಪಯೋಗವಾಗಿರುವುದು ಮತ್ತೊಂದು ವಿಶೇಷ. ಸಮುದಾಯದ ಹತ್ತು ಹಲವು ಹೋರಾಟಗಳಲ್ಲಿ ತೊಡಗಿಸಿಕೊಂಡಿರುವ ದು. ಸರಸ್ವತಿ ಎನ್ನುವ ಬದಲು do ಸರಸ್ವತಿ ಎಂದು ಇರಬೇಕಾಗಿತ್ತು ಎಂದು ಹಾಸ್ಯ ಮಾಡಿದರು.

ಪುಸ್ತಕದ ಹಿನ್ನಲೆಯಲ್ಲಿ ಮಾನವ ಹಕ್ಕುಗಳ ಕುರಿತು ಪ್ರೊ॥ ಹಸನ್ ಮನ್ಸೂರ್ ಅವರು ಮಾತನಾಡಿ, ಪ್ರತಿಯೊಬ್ಬರಿಗೂ ಡಿಗ್ನಿಟಿಯಿಂದ ಬಾಳುವುದು ಮೂಲಭೂತ ಹಕ್ಕಾಗಿದೆ ಮಾನವ ಹಕ್ಕುಗಳ ಉಲ್ಲಂಘನೆ ಯಾದಾಗ ನಾವು ಹೆಚ್ಚೆಂದರೆ ವರದಿಯನ್ನು ಪ್ರಕಟಿಸುತ್ತಿವೆ. ಆದರೆ ನಂತರದ ಸ್ಥಿತಿ-ಗತಿಯ ಬಗ್ಗೆ ನಾವು ಹೆಚ್ಚು ಕಾಳಜಿ ತೋರಿಸುವುದಿಲ್ಲ. ಸರಸ್ವತಿಯವರ ಈ ಕೃತಿ ಹೆಚ್ಚು ಒಳನೋಟಗಳನ್ನು ನೀಡುತ್ತದೆ ಎಂದು ನುಡಿದರು.

ಇದೇ ಸಂದರ್ಭದಲ್ಲಿ ಮಹಿಳಾ ಖೈದಿಗಳ ಪರವಾಗಿ ಕೆಲಸ ಮಾಡುತ್ತಿರುವ ಡಾ॥ ಸುಜಾತಾ ಮಾತನಾಡುತ್ತಾ, ಸರಿಯಾದ ಸಾಕ್ಷಿ ಇಲ್ಲದೇ ಮಹಿಳೆಯನ್ನು ಬಂಧಿಸಬಾರದು. ತಪ್ಪು ಮಾಡದ ನಿರಪರಾಧಿ ಮಹಿಳೆಯರು, ಮಕ್ಕಳು ನೂರಾರು ಮಂದಿ ಜೈಲುಗಳಲ್ಲಿದ್ದಾರೆ. ಅವರಿಗಾಗಿ ನಾವೆಲ್ಲ ಕೆಲಸ ಮಾಡಬೇಕು. ತಾಯಿಯ ಜೊತೆಗೆ ಜೈಲಿಗೆಬರುವ ಮಕ್ಕಳು ಒಳ್ಳೆಯ ಪ್ರಜೆಯಾಗಲು ಹೇಗೆ ಸಾಧ್ಯ? ಎಂಬ ಹತ್ತಾರು ಪ್ರಶ್ನೆಗಳನ್ನು ಸಭೆಯ ಮುಂದಿಟ್ಟರು.

ಬದುಕು ಎಷ್ಟೇ ದುರಂತವಾಗಿದ್ದರೂ ಎಲ್ಲದರಲ್ಲೂ ಜೀವಂತವಾಗಿ ಬದುಕುವುದನ್ನು ಕಲಿಯಬೇಕೆಂದು ಲೇಖಕಿ ಸರಸ್ವತಿ. ದು ಅವರು ತಮ್ಮ ಅನುಭವಗಳನ್ನ ಹಂಚಿಕೊಂಡರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಡಾ॥ ವಿಜಯಾ ಅವರು ಮಾತನಾಡಿ, ಹೋರಾಟದ ಕಥೆಗಳು ನಿಜವಾದ ಮುಖ್ಯ ವಾಹಿನಿಗೆ ತಲುಪಬೇಕಾಗಿದ್ದು, ಆ ಕೆಲಸವನ್ನ ಲೇಖಕರು, ಬುದ್ಧಿಜೀವಿಗಳು ಮಾಡಬೇಕೆಂದರು.

ತುಂಬಾ emotional ಆಗಿದ್ದಂತಹ ಸಮಾರಂಭದಲ್ಲಿ "ಜಾರ್ಬಂಡೆ" ಕಲಾವಿದರು ಆಗಾಗ ಹಾಡುಗಳನ್ನು ಹಾಡಿ ಸಭಿಕರನ್ನು ರಂಜಿಸಿದರು.

ಮಾನಸದ ಚಂಪಾ ಅವರಿಂದ ಸ್ವಾಗತ, ಸವಿತಾರಿಂದ ನಿರೂಪಣೆ ಹಾಗೂ ಶಾರದರಿಂದ ವಂದನೆಯಾಯಿತು. ಒಟ್ಟಿನಲ್ಲಿ ಸಮಾರಂಭ ಎಲ್ಲಾ ಆತ್ಮೀಯರ, ಸ್ನೇಹಿತರ, ಲೇಖಕರ ನಡುವೆ ತುಂಬಾ ಆತ್ಮೀಯವಾಗಿ ನಡೆಯಿತು.

- ವರದಿ

# ಬಾಗೀರಥಿ ಮತ್ತು ಅಪ್ಪಾಜಿ

ಒಗಟೊಂದ ಬಿಡಿಸೇ ಭಾಗೀರಥಿ
ಒಗಟೊಂದ ಬಿಡಿಸು
ತಾಯಿ ಸರಸ್ವತಿ
ಮಗಳು ಮೈತ್ರೇಯಿ
ಇವರದೊಂದು ಸುಖ ಸಂಸಾರ
ಇವರಿಗೆ ಅಳಿವಿಲ್ಲ
ಇವರ ಸುಳಿವೂ ಇಲ್ಲ
ಒಗಟೊಂದ ಬಿಡಿಸೇ ಭಾಗೀರಥಿ

ಶಹರದ ಸಿರಿವಂತನ ನೆಂಟರಂತೆ
ನಾಗರೀಕನ ಮನೆಯ ನೆರೆಯಂತೆ
ಸುಸಂಸ್ಕೃತರ ಜೊತೆಗಾರರಂತೆ
ಇವಳಿಲ್ಲದವರ ಬದುಕು ಬರೀ ಸೊನ್ನೆಯಂತೆ
ಒಗಟ ಬಿಡಿಸೇ ಭಾಗೀರತಿ ಒಗಟೊಂದ ಬಿಡಿಸೇ...
ಅಪ್ಪಾಜಿ ನಾ ಉತ್ತರವ ಬಲ್ಲೆ
ಆದರೂ ನನ್ನ ಮಾತ ನೀ ಒಲ್ಲೆ
ಕೇಳು ನನ್ನ ಉತ್ತರವ ಹೇಳು ನಾನೇಕೆ ಸೊನ್ನೆ...

ಕಿವಿ ತೆರೆದು ಕೇಳು ನಾ
ಸುಶ್ರಾವ್ಯವಾಗಿ ಹಾಡುವ ವ್ಯಾಸ ಭಾರತ
ತಾಯಿ ಕುಂತಿಯ ಅಸಹಾಯಕತೆ, ಅಪಮಾನ
ಪತಿವ್ರತೆ ದ್ರೌಪದಿಯ ದುಃಖ ದುಮ್ಮಾನ
ಕರ್ಣನ ನಿರಂತರ ಸೋಲು
ಹಾಗೂ ಕೃಷ್ಣನ ಕಪಟತನ
ಕೇಳು, ನನ್ನ ಭಾರತದ ಧಾಟಿಯೇ ಬೇರೆ
ನಿನ್ನ ಚುಕ್ಕೆಯಂಥಹ ಕಣ್ಣುಗಳ ತೆರೆದು ನೋಡು
ನಮ್ಮ ಮನೆಯ ಅಂಗಳದಲ್ಲಿ ನಾ ಹಾಕಿರುವ
ಶಂಖ ಚಕ್ರ ರಂಗವಲ್ಲಿ

ಗೋಡೆಯುದ್ದಕ್ಕೂ ಬಿಡಿಸಿರುವೆ ನಮ್ಮೂರ ಚಿತ್ರಾವಳಿ
ಹಿತ್ತಲಲ್ಲಿ ಬೆಳೆಸಿರುವ ಮಾವು ತೆಂಗು ಪಪ್ಪಾಯಿ
ಜೊತೆ ಜೊತೆಗೇ ಬೆಳೆದ ನಿಮ್ಮ ಕಣ್ಮಣಿ ಕಂದಮ್ಮಗಳು

ನಿನ್ನ ಮೃದುವಾದ ಕೈಯಿಂದ ನೇವರಿಸಿ ನೋಡು
ನಾ ಕೈಯಾರೆ ನೇಯ್ದ ರೇಶಿಮೆ ಶಾಲು
ಮೂಗರಳಿಸಿ ಆಘ್ರಾಣಿಸಿ ನೋಡು
ಮನೆಯಲ್ಲೇ ಅರಳಿರುವ ಮಲ್ಲಿಗೆಯ ಕಂಪು

ನಿನ್ನ ಹೃದಯ ತೆರೆದು ಸ್ಪರ್ಶಿಸು
ನಿನ್ನ ಮಗು ಭಾಗೀರಥಿಯ ಭಾವ, ಮನಸ್ಸು
ಅದರಾಳದಲ್ಲಿ ಹೂತಿಟ್ಟಿರುವ ಜ್ಞಾನ ಸಂಪತ್ತು
ಇನ್ನಾದರೂ ಹೇಳು ನಾನು ಸೊನ್ನೆಯೇ

ಸದಾ ನಿನ್ನ ಮೆದುಳಿನಲ್ಲಿರುವುದು
ವ್ಯಾಪಾರ, ವ್ಯವಹಾರ, ಕಾನೂನು ಕರಾರು
ನಿನ್ನ ಬೊಕ್ಕಸವ ತುಂಬಿರುವುದು
ಲಿಖಿತ ಸಾಕ್ಷಿಗಳು, ಲಾ ಪಾಯಿಂಟ್‌ಗಳು
ನಿನ್ನ ಮಾತಿನಲ್ಲಿರುವುದು
ಮೋಸದ ವಿರುದ್ಧ ಎಚ್ಚರಿಕೆ
ಮತ್ತು ಜನ ಜಾಗೃತಿ
ನಿನ್ನ ಭಾಷೆಗಿರುವುದು ಅಆಇ ಅಥವಾ ಎಬಿಸಿ
ನನ್ನರಿವಿಗೆ ತಿಳಿದಿದೆ
ನಿನ್ನಂತೆಯೇ ನನ್ನನ್ನು ಸೊನ್ನೆಯಾಗಿಸಿದವರು
ಸಾವಿರಾರು ಮಂದಿ ಎಂದು
ಕೇಳು ನನ್ನ ಕಿವಿಗಳ ತುಂಬಿದೆ
ಬರಿದ ಭೂತಾಯಿ ಶ್ರೀರಾಮನಿಗೆ ಕೂಗಿದ ಧಿಕ್ಕಾರ
ನನ್ನ ಇರುವನು ತುಂಬಿದೆ
ರೂಪ ಕನ್ವರಳ ಚೀತ್ಕಾರ
ನನ್ನ ಅಂತರಂಗವ ತುಂಬಿದೆ ಸದಾ ಹರಿವ ಪ್ರೀತಿ
ನನ್ನ ಹಾಡಿಗಿರುವುದೂ ಇದೊಂದೇ ನೀತಿ
ಹೇಳು ನಾನೇಕೆ ಸೊನ್ನೆ......

- ಚಿತ್ರಾ

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದ ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 50 ರೂ**

**ಸಂಸ್ಥೆಗಳಿಗೆ : 100 ರೂ**

ಸಂ. ಮಂಡಳಿ

REGD No. : CPMG/KA/BGE/289/2001

BOOK - POST
PRINTED MATTER

ವಿಳಾಸ:
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067